ಎಂ.ಫಿಲ್. ಪದವಿಯ ಸಂಪ್ರಬಂಧ

# ಶ್ರೀಕಂಠೇಶಗೌಡರ ನಾಟಕಗಳು

## ಒಂದು ಅಧ್ಯಯನ


ಸಂಶೋಧನ ವಿದ್ಯಾರ್ಥಿ

ಕೆ.ಎಂ. ಸುರೇಶ

ಮಾರ್ಗದರ್ಶಕರು

ಪ್ರೊ|| ಜಿ. ಅಶ್ವತ್ಥನಾರಾಯಣ



ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು

ಎಂ.ವಿ.ಸೀ ಸ್ನಾತಕೋತ್ತರ ಸಂಶೋಧನ ಕೇಂದ್ರದ

ಮೂಲಕ

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದೆ

2007

ಎಂ.ಫಿಲ್. ಪದವಿಯ ಸಂಪ್ರಬಂಧ

# ಶ್ರೀಕಂಠೇಶಗೌಡರ ನಾಟಕಗಳು

## ಒಂದು ಅಧ್ಯಯನ

ಸಂಶೋಧನ ವಿದ್ಯಾರ್ಥಿ
ಕೆ.ಎಂ. ಸುರೇಶ

ಮಾರ್ಗದರ್ಶಕರು
ಪ್ರೊ|| ಜಿ. ಅಶ್ವತ್ಥನಾರಾಯಣ






ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು
ಎಂ.ವಿ.ಸೀ ಸ್ನಾತಕೋತ್ತರ ಸಂಶೋಧನ ಕೇಂದ್ರದ
ಮೂಲಕ
ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದೆ
2007

568

## ಅಭ್ಯರ್ಥಿಯ ಪ್ರಮಾಣಪತ್ರ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ 2006–2007ನೇ ಸಾಲಿನ ಎಂ.ಫಿಲ್ ಪದವಿಗಾಗಿ **'ಶ್ರೀಕಂಠೇಶಗೌಡರ ನಾಟಕಗಳು ಒಂದು ಅಧ್ಯಯನ'** ಸಂಪ್ರಬಂಧವನ್ನು ಪ್ರೊ॥ ಜಿ. ಅಶ್ವತ್ಥನಾರಾಯಣ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದೇನೆ.

ಈ ಸಂಪ್ರಬಂಧ ನನ್ನ ಸ್ವಂತ ಬರವಣಿಗೆ ಆಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ : 27-8-2007

ಸ್ಥಳ : ಬೆಂಗಳೂರು

ಸಹಿ: [signature]

**(ಕೆ.ಎಂ. ಸುರೇಶ)**

## ಮಾರ್ಗದರ್ಶಕರ ಪ್ರಮಾಣಪತ್ರ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ 2006–2007ನೇ ಸಾಲಿನ ಎಂ.ಫಿಲ್ ಪದವಿಗಾಗಿ **'ಶ್ರೀಕಂಠೇಶಗೌಡರ ನಾಟಕಗಳು ಒಂದು ಅಧ್ಯಯನ'** ಸಂಪ್ರಬಂಧವನ್ನು ಶ್ರೀ ಕೆ.ಎಂ. ಸುರೇಶ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

ಈ ಸಂಪ್ರಬಂಧ ವಿದ್ಯಾರ್ಥಿಯ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಬೇರೆಲ್ಲೂ ಪ್ರಕಟಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ : 27-8-2007

ಸ್ಥಳ : ಬೆಂಗಳೂರು

ಸಹಿ

(ಜಿ. ಅಶ್ವತ್ಥನಾರಾಯಣ)

ಶ್ರೀಕಂಠೇಶಗೌಡರ ನಾಟಕಗಳು–ಒಂದು ಅಧ್ಯಯನ

# ಪರಿವಿಡಿ

**ಅನುಬಂಧಗಳು :**



---

## ಅಧ್ಯಾಯ-1

# ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ

ಕನ್ನಡ ನಾಟಕ ಪರಂಪರೆ ಪ್ರಾಚೀನ ಕಾಲದಿಂದಲೂ ಇರುವುದು ಯಕ್ಷಗಾನ,[1] ಬಯಲಾಟ, ದೊಡ್ಡಾಟ, ಮೊದಲಾದ ಜಾನಪದ ಪರಂಪರೆಯ ನಾಟಕಗಳನ್ನು ಕಂಡಾಗ ತಿಳಿದುಬರುತ್ತದೆ. ಆದರೆ ಕನ್ನಡ ಲಿಖಿತ ನಾಟಕ ಸಾಹಿತ್ಯ ಪರಂಪರೆ ಕೇವಲ ಒಂದೆರಡು ಶತಮಾನಗಳ ಹಿಂದಿನದ್ದು, ಕೇವಲ ಲಿಖಿತ ನಾಟಕ ಸಾಹಿತ್ಯ ಪರಂಪರೆಯನ್ನು ಕಂಡು ಕನ್ನಡ ನಾಟಕ ಚರಿತ್ರೆಯನ್ನು ಚರ್ಚಿಸುವುದು ಸರಿಯಲ್ಲ. ನಿಜವಾದ ನಾಟಕ ಪರಂಪರೆಯು ಕಂಡು ಬರುವುದು ಮೌಖಿಕ ಪರಂಪರೆಯಲ್ಲಿ, ಅಭಿನಯ ಪ್ರದರ್ಶನ ಕಲೆಯಲ್ಲಿ ಮತ್ತು ದೃಶ್ಯಪರಂಪರೆಯಲ್ಲಿ ನಾಟಕ ಸಾಹಿತ್ಯವಿರುವುದು ಕಂಡು ಬರುತ್ತದೆ. ಲಿಖಿತವಿಲ್ಲದಿದ್ದರೂ ಜಾನಪದ ಕಾವ್ಯಪರಂಪರೆಯಲ್ಲಿ ಸಾಹಿತ್ಯವಿದ್ದಂತೆ, ಮೌಖಿಕ ದೃಶ್ಯಪರಂಪರೆಯಲ್ಲೂ ಸಾಹಿತ್ಯವಿರುವುದನ್ನು ಕಾಣುತ್ತೇವೆ. ಈ ದೃಷ್ಟಿಯಿಂದ ಕನ್ನಡ ನಾಟಕ ಪರಂಪರೆ ಪ್ರಾಚೀನವಾದುದು.

ಪ್ರಸ್ತುತ ಸಂಪ್ರಬಂಧದಲ್ಲಿ ಲಿಖಿತ ನಾಟಕ ಸಾಹಿತ್ಯ ಪರಂಪರೆಯನ್ನು ಆಧಾರವಾಗಿಟ್ಟುಕೊಂಡು ಶ್ರೀಕಂಠೇಶಗೌಡರ ನಾಟಕಗಳ ಅಧ್ಯಯನಕ್ಕೆ ಪ್ರಯತ್ನಿಸಿದೆ. ಕನ್ನಡ ನಾಟಕ ಸಾಹಿತ್ಯ ಅಭ್ಯಾಸಿಗರು ಮಿತ್ರವಿಂದಗೋವಿಂದದಿಂದ[2] ನಾಟಕ ಸಾಹಿತ್ಯ ಚರಿತ್ರೆಯನ್ನು ಪ್ರಾರಂಭಿಸುತ್ತಾರೆ. ಅಲ್ಲಿಂದ ಇಲ್ಲಿಯವರೆಗೆ ಕನ್ನಡ ರಂಗಭೂಮಿಯಲ್ಲಿ ಪ್ರದರ್ಶನದ ದೃಷ್ಟಿಯಿಂದ ಹಲವು ಘಟ್ಟಗಳನ್ನು ಕಾಣುತ್ತೇವೆ. ಈ ಎಲ್ಲಾ ಘಟ್ಟಗಳಲ್ಲೂ ಮುಖ್ಯವಾಗಿ ಕಂಪನಿ ನಾಟಕಗಳ ಯುಗ[3] ಮಹತ್ವಪೂರ್ಣವಾದುದು. ಇಂದಿಗೂ ಕಂಪನಿ ನಾಟಕಗಳ ಬೆಳವಣಿಗೆ ಕುಗ್ಗಿದ್ದರೂ ನಾಶವಾಗಿಲ್ಲ. ಕಂಪನಿ ನಾಟಕಗಳನ್ನು ಗಮನಿಸಿದಾಗ ಷೇಕ್ಸ್‌ಪಿಯರ್‌ನ ನಾಟಕದ ಸಾಹಿತ್ಯ ಪ್ರಭಾವವಿರುವುದನ್ನು ಕಾಣುತ್ತೇವೆ. ಈ ಹಿನ್ನೆಲೆಯಲ್ಲಿ ಕನ್ನಡ ನಾಟಕ ಪರಂಪರೆಯಲ್ಲಿ ಷೇಕ್ಸ್‌ಪಿಯರ್‌ನ ನಾಟಕಗಳ ಸಮೀಕ್ಷೆಯನ್ನು ಈ ಅಧ್ಯಯನದಲ್ಲಿ ಕೈಗೊಂಡಿದೆ. ಕನ್ನಡ ರಂಗಭೂಮಿಯಲ್ಲಿ ಷೇಕ್ಸ್‌ಪಿಯರ್‌ನ ಪ್ರಭಾವವನ್ನು ಗುರುತಿಸಿದೆ. ಹೀಗೆ ಗುರುತಿಸುವಾಗ ಷೇಕ್ಸ್‌ಪಿಯರ್‌ನ ನಾಟಕಗಳನ್ನು ಕನ್ನಡಕ್ಕೆ ಅನುವಾದಿಸಿದವರ ಕೃತಿಗಳನ್ನು ಸಮಗ್ರ ನೋಟದಿಂದ ಪರಿಶೀಲಿಸುವ ಕಾರ್ಯವನ್ನು ಕೈಗೊಂಡಿದೆ. ಈ ಕಾರ್ಯದಲ್ಲಿ ಕನ್ನಡಕ್ಕೆ ಷೇಕ್ಸ್‌ಪಿಯರ್‌ನ ನಾಟಕಗಳನ್ನು ಕೃತಿ ರಚನೆಯ ಮೂಲಕ, ಅಭಿನಯದ ಮೂಲಕ, ಕಂಪನಿ ಕಟ್ಟಿ,[4] ನಾಟಕ ಆಡಿಸುವುದರ ಮೂಲಕ ಹೆಸರು ಮಾಡಿದ ವಿಶಿಷ್ಟ ಸಾಹಿತಿ ಎಂದರೆ ಶ್ರೀಕಂಠೇಶಗೌಡರು. ಇವರು ಆ ಕಾಲದಲ್ಲಿ ಇಂಗ್ಲಿಷ್ ನಾಟಕಗಳನ್ನು ಕನ್ನಡಕ್ಕೆ ರೂಪಾಂತರಿಸಿದ ಪ್ರಮುಖರು. ಶ್ರೀಕಂಠೇಶಗೌಡರ ನಾಟಕಗಳ ಬಗ್ಗೆ ಮೊದಲ ಬಾರಿಗೆ ಈ ಸಂಪ್ರಬಂಧದಲ್ಲಿ ವಿಶೇಷ ಅಧ್ಯಯನ ಮಾಡಲು ಪ್ರಯತ್ನಿಸಲಾಗಿದೆ.

ಇಂಗ್ಲಿಷ್‌ನಿಂದ ಕನ್ನಡಕ್ಕೆ ನಡೆಯುವ ಭಾಷಾಂತರ ಕ್ರಿಯೆ ಒಂದು ಹೊಸ ಪ್ರಕ್ರಿಯೆಯಾಯಿತು. ಆಧುನಿಕ ಶಿಕ್ಷಣ ಪಡೆದವರು ಮಾತ್ರ ಎರಡು ಭಾಷೆಗಳ ನಡುವಿನ ಮಧ್ಯವರ್ತಿಗಳಾಗಿದ್ದರು. ಇಂತಹ ಪರಿಸ್ಥಿತಿಯೊಳಗೆ ಎಂ.ಎಲ್.ಶ್ರೀಕಂಠೇಶಗೌಡರು ಷೇಕ್ಸ್‌ಪಿಯರ್‌ನನ್ನು ಕನ್ನಡಕ್ಕೆ ತಂದಿರುವುದು ಕಂಡುಬರುತ್ತದೆ. ಶ್ರೀಕಂಠೇಶಗೌಡರು ಸಂಸ್ಕೃತ ಇಂಗ್ಲಿಷ್ ಬಲ್ಲವರಾಗಿದ್ದರು. 20ನೇ ಶತಮಾನದ ಆದಿಯಲ್ಲಿದ್ದ ಪ್ರತಿಭಾವಂತ ಸಾಹಿತಿ ಮತ್ತು ಗಣ್ಯ ವ್ಯಕ್ತಿ. ನವೋದಯ ಸಾಹಿತ್ಯ ಕ್ಷೇತ್ರದಲ್ಲಿ ಕಾವ್ಯ ರಚಿಸಿ, ಕಥೆ, ನಾಟಕ, ಕಾದಂಬರಿಗಳನ್ನು ಪತ್ರಿಕೆ ನಡೆಸಿ ಸಂಘಸಂಸ್ಥೆ ಕಟ್ಟಿದ ಮಹಾಪುರುಷರು. ಶ್ರೀಕಂಠೇಶಗೌಡರು, ಇದ್ದಕಾಲ ಬಸವಪ್ಪಶಾಸ್ತ್ರಿ, ವರದಾಚಾರ್, ಚುರಮುರಿ ಶೇಷಗಿರಿರಾಯರು ಮೊದಲಾದವರು ಮೆರೆಯುತ್ತಿದ್ದ ಕಾಲ. ಗದುಗಿನ ವೀರನಾರಾಯಣ ನಾಟಕ ಮಂಡಳಿ, ರಾಜಧಾನಿ ನಾಟಕ ಮಂಡಳಿ ಹಾಗೂ ಚಾಮರಾಜೇಂದ್ರ ನಾಟಕಮಂಡಳಿಯಂತಹ ರಾಜಕೃಪಾಪೋಷಿತ ಮಂಡಳಿಗಳು ಇದ್ದ ಕಾಲದಲ್ಲಿ ಖಾಸಗಿಯಾಗಿ ಶ್ರೀಕಂಠೇಶಗೌಡರು ನಾಟಕಮಂಡಳಿ ಕಟ್ಟಿ, ಈ ಕಂಪನಿ ಮೂಲಕವೇ ನಾಟಕವಾಡಿಸಿ ಜನಪ್ರಿಯತೆಗಳಿಸಿದವರು. ಇಂತಹ ಸಾಹಿತಿ, ನಾಟಕಗಾರ, ಕವಿ, ಗಣ್ಯವ್ಯಕ್ತಿಯ ಕೃತಿಗಳ ಅಧ್ಯಯನವನ್ನು ಇಲ್ಲಿ ಮಾಡಲಾಗಿದೆ. ಕಂಪನಿ ನಾಟಕಗಳ ಇತಿಹಾಸದಲ್ಲಿ ಶ್ರೀಕಂಠೇಶಗೌಡರು ಕಟ್ಟಿದ ಸಂಸ್ಥೆಯ ಪಾತ್ರವೇನು? ಆಡಿದ ನಾಟಕಗಳ ಪರಿಣಾಮವೇನು? ಷೇಕ್ಸ್‌ಪಿಯರ್ ಕನ್ನಡ ರಂಗಭೂಮಿಗೆ, ಅವರ ನಾಟಕಗಳಲ್ಲಿ ಹೇಗೆ ಕಾಣಿಸಿಕೊಂಡ? ಜಾನಕೀ ಪರಿಣಯದಂತಹ ಸಂಸ್ಕೃತ ನಾಟಕವನ್ನು ಕನ್ನಡಕ್ಕೆ ತಂದು ಯಶಸ್ವಿಯಾಗಿದ್ದು ಹೇಗೆ? ಏಕೆ? ಇಂತಹ ಹತ್ತಾರು ವಿಚಾರಗಳನ್ನು ಇಲ್ಲಿ ವಿಮರ್ಶಿಸಿದೆ.

ಇಂಗ್ಲಿಷ್ ರುದ್ರನಾಟಕವಾದ ಮ್ಯಾಕ್ಬೆತ್, ಹರ್ಷನಾಟಕವಾದ ಎ ಮಿಡ್ ಸಮ್ಮರ್ ನೈಟ್ಸ್ ಡ್ರೀಮ್ ನಾಟಕಗಳನ್ನು ಕನ್ನಡದಲ್ಲಿ ಎಷ್ಟು ಜನ ಹೇಗೆ ಮೂಡಿಸಿದ್ದಾರೆ.[5] ಶ್ರೀಕಂಠೇಶಗೌಡರ ಅನುವಾದ ಎಷ್ಟರಮಟ್ಟಿಗೆ ಯಶಸ್ವಿಯಾಗಿದೆ. ಮುಖ್ಯವಾಗಿ ರಂಗಪ್ರದರ್ಶನಕ್ಕಾಗಿ ಅನುವಾದವಾದ ಈ ನಾಟಕಗಳು ರಂಗದಲ್ಲಿ ಉಳಿದವರ ಅನುವಾದಕ್ಕಿಂತ ಯಶಸ್ವಿಯಾಗಲು ಕಾರಣವೇನು? ಇಂತಹ ವಿಚಾರಗಳನ್ನು ಇಲ್ಲಿ ಚರ್ಚಿಸಲಾಗಿದೆ. ಕನ್ನಡ ರಂಗಭೂಮಿ ಬೆಳವಣಿಗೆ ಹಿನ್ನೆಲೆಯಲ್ಲಿ ಮತ್ತು ಕನ್ನಡದಲ್ಲಿರುವ ಷೇಕ್ಸ್‌ಪಿಯರ್ ನಾಟಕಗಳನ್ನು ಅನುವಾದದ ಹಿನ್ನೆಲೆಯಲ್ಲಿ ಶ್ರೀಕಂಠೇಶಗೌಡರ ಕೊಡುಗೆ ಏನೆಂಬುದನ್ನು ಅವರ ನಾಟಕಗಳ ಅಧ್ಯಯನ ಮೂಲಕ ಮೌಲ್ಯಮಾಪನ ಮಾಡುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಕಾಣಬಹುದು. ಕನ್ನಡ ನಾಟಕ ಸಾಹಿತ್ಯ ಕ್ಷೇತ್ರದಲ್ಲಿ ಮತ್ತು ರಂಗಭೂಮಿ ಇತಿಹಾಸದಲ್ಲಿ ಅವಜ್ಞೆಗೆ ಒಳಗಾದ ಪ್ರತಿಭಾವಂತ ಶ್ರೀಕಂಠೇಶಗೌಡರ ಸಾಹಿತ್ಯ ಜೀವನದ ಬಗ್ಗೆ ಬೆಳಕು ಬೀರಲು ಈ ಅಧ್ಯಯನವನ್ನು ಕೈಗೊಂಡಿದೆ.

---

# ಅಧ್ಯಾಯ – 2

# ಕನ್ನಡ ನಾಟಕ ನಡೆದುಬಂದ ದಾರಿ ಮತ್ತು ವೃತ್ತಿರಂಗಭೂಮಿ–ಸಂಕ್ಷಿಪ್ತಾವಲೋಕನ

## ಅ) ಪ್ರಾರಂಭ

ಕನ್ನಡ ನಾಟಕ ನಡೆದು ಬಂದ ದಾರಿಯ ಬಗ್ಗೆ ವಿಹಂಗಮ ದೃಷ್ಟಿ ಬೀರಿದಾಗ ಎರಡು ದೃಷ್ಟಿಗಳಿಂದ ಕನ್ನಡ ನಾಟಕದ ಇತಿಹಾಸವನ್ನು ಅವಲೋಕಿಸಬಹುದಾಗಿದೆ. ಮೊದಲನೆಯದಾಗಿ ನಾಟಕ ಸಾಹಿತ್ಯದ ಅವಲೋಕನ, ಎರಡನೆಯದಾಗಿ ಕನ್ನಡ ರಂಗಭೂಮಿ ಬೆಳವಣಿಗೆಯ ಇತಿಹಾಸದ ಅವಲೋಕನ. ಯಾವುದೇ ನಾಟಕ ಯಶಸ್ವಿಯಾಗಬೇಕಾದರೆ, ಸಾಹಿತ್ಯವಾಗಿ ಅದು ಮೊದಲು ಬರಹದಲ್ಲಿ ಮೂಡಬೇಕು. ಅನಂತರ ಅದು ರಂಗಪ್ರಯೋಗಕ್ಕೆ ಒಳಗಾಗಬೇಕು. ನಮ್ಮಲ್ಲಿ ಎಷ್ಟೋ ನಾಟಕಗಳು ರಂಗಪ್ರದರ್ಶನಕ್ಕೆ ಬಾರದೇ ಸಾಹಿತ್ಯವಾಗಿಯೇ ಉಳಿದಿವೆ.

ನಾಟಕ ಕೃತಿಯೊಂದು ಬರಹಗಾರನ ಮನಃಪಟಲದಲ್ಲಿ ಮೂಡಿ ನಾಟಕ ಕೃತಿಯಾಗಿ ಅನಂತರ ಸಾಹಿತ್ಯವಾಗಿ ಬರಹದಲ್ಲಿ ಕಾಣಿಸಿಕೊಂಡ ಮೇಲೆ ಅದನ್ನು ರಂಗವೇದಿಕೆಯಲ್ಲಿ ಪ್ರತಿಭಾವಂತ ಕಲಾವಿದರು ಪ್ರದರ್ಶನ ನೀಡಿದಾಗ ಅದರ ಸಾರ್ಥಕತೆಯನ್ನು ಕಾಣುತ್ತೇವೆ. ಕನ್ನಡ ನಾಟಕ ಇತಿಹಾಸವನ್ನು ಕಂಡಾಗ ನಾಟಕಗಳು ರಂಗಪ್ರದರ್ಶನಕ್ಕಾಗಿಯೇ ರಚಿತವಾಗಿರುವುದನ್ನು ಕಾಣುತ್ತೇವೆ. ಶ್ರೀಕಂಠೇಶಗೌಡರು ನಾಟಕಗಳನ್ನು ರಚಿಸಿದವರು ಮತ್ತು ತಾವೇ ರಂಗಕ್ಕೆ ತಂದ ವಿಶಿಷ್ಟ ವ್ಯಕ್ತಿಗಳಾಗಿದ್ದಾರೆ. ಅನೇಕ ಸಂದರ್ಭದಲ್ಲಿ ನಾಟಕರಚನಾಕಾರರು, ರಂಗಕಲಾವಿದರೂ ಆಗಿಲ್ಲದ ಸಂದರ್ಭಗಳು ಉಂಟು. [1a]ಆಧುನಿಕ ನಾಟಕ ಸಾಹಿತ್ಯದಲ್ಲಿ ಇದಕ್ಕೆ ವಿಪುಲ ನಿದರ್ಶನಗಳು ದೊರಕುತ್ತವೆ. ಶ್ರೀಕಂಠೇಶಗೌಡರ ನಾಟಕಗಳ ಅವಲೋಕನಕ್ಕೆ ಪೀಠಿಕೆಯಾಗಿ ಕನ್ನಡ ನಾಟಕ ನಡೆದು ಬಂದ ದಾರಿಯ ಸಂಕ್ಷಿಪ್ತಾವಲೋಕನ ಮಾಡುವದು ಅಗತ್ಯವಿದೆ. ಕನ್ನಡ ರಂಗಭೂಮಿ ಇತಿಹಾಸವನ್ನು ಸಮಗ್ರವಾಗಿ ಗಮನಿಸಿದಾಗ ಡಾ॥ ಹೆಚ್.ಕೆ. ರಂಗನಾಥರು ಗುರುತಿಸಿರುವಂತೆ ನಾಲ್ಕು ಘಟ್ಟಗಳನ್ನು ಕಾಣಬಹುದಾಗಿದೆ.[1b]

1. ಕ್ರಿ.ಶ. 1880 ರಿಂದ ಕ್ರಿ.ಶ. 1900ರವರೆಗೆ
   (ಪ್ರಯೋಗ ಹಾಗೂ ಸ್ಥಾಪನೆಯ ಕಾಲ)

2. ಕ್ರಿ.ಶ. 1900 ರಿಂದ ಕ್ರಿ.ಶ. 1940ರವರೆಗೆ
   (ಏಳಿಗೆಯ ಸ್ವರ್ಣಯುಗ)

3. ಕ್ರಿ.ಶ. 1940ರಿಂದ ಕ್ರಿ.ಶ. 1950ರವರೆಗೆ
(ಸ್ಪರ್ಧೆ ಹಾಗೂ ಕ್ಷೀಣತೆಯ ಕಾಲ)

4. ಕ್ರಿ.ಶ. 1950 ರಿಂದ ಈಚೆಗೆ
(ಸ್ವಾತಂತ್ರ್ಯಾನಂತರದ ಹೊಸ ಜೀವನ)

ಇಲ್ಲಿ ಶ್ರೀಕಂಠೇಶಗೌಡರ ಕಾಲದವರೆಗಿನ ಕನ್ನಡ ನಾಟಕದ ಇತಿಹಾಸವನ್ನು, ರಂಗಭೂಮಿ ಬೆಳವಣಿಗೆಯನ್ನು ಮತ್ತು ಶ್ರೀಕಂಠೇಶಗೌಡರ ಕಾಲದ ಕೆಲವು ಪ್ರಮುಖ ನಾಟಕ ಕಂಪನಿಗಳ ಇತಿಹಾಸವನ್ನು ಪ್ರಸ್ತಾಪಿಸಿದೆ.

**ಆ) ಕನ್ನಡದ ಮೊದಲ ನಾಟಕ**

"ಆಧುನಿಕ ಕನ್ನಡ ಸಾಹಿತ್ಯದಲ್ಲಿ 'ನಾಟಕ' ಒಂದು ಸಾಹಿತ್ಯದ ಪ್ರಕಾರವಾಗಿದ್ದರೂ, ಉಳಿದ ಸಾಹಿತ್ಯ ಪ್ರಕಾರಗಳಿಗಿಂತ ಭಿನ್ನವಾದ ಪ್ರಕಾರವಾಗಿದೆ. 'ನಾಟಕ' ಎಂಬ ಪದ ನಟನೆ/ನಟನ ಎಂಬ ಪದದಿಂದ ನಿಷ್ಪತ್ತಿಯಾಗಿದೆ. ನಾಟಕ ಎನ್ನುವುದು ಒಂದು ಕ್ರಿಯೆಯ ಅನುಕರಣ".[2] ಇಂತಹ ಅನುಕರಣ ಕ್ರಿಯೆಯಿಂದ ಹುಟ್ಟಿದ ನಾಟಕ ಪ್ರಕಾರವು ಸಾಹಿತ್ಯ ಪ್ರಕಾರದಲ್ಲೂ, ದೃಶ್ಯಮಾಧ್ಯಮ ಪ್ರಕಾರದಲ್ಲೂ ಪ್ರಮುಖ ಸ್ಥಾನಗಳಿಸಿದೆ. ಜನಪದ ರಂಗಭೂಮಿ ಮೂಲವಾಗಿದ್ದು ಆಧುನಿಕ ಕನ್ನಡ ನಾಟಕ ಪ್ರಕಾರ ಸಂಸ್ಕೃತ ಮತ್ತು ಇಂಗ್ಲಿಷ್ ನಾಟಕಗಳಿಂದ ಪ್ರೇರಿತವಾದದ್ದು ಎಂಬುದು ಕನ್ನಡ ನಾಟಕಗಳ ಹುಟ್ಟು ಮತ್ತು ಇತಿಹಾಸವನ್ನು ಗಮನಿಸಿದಾಗ ತಿಳಿದು ಬರುತ್ತದೆ. ಕನ್ನಡ ನಾಟಕ ಪರಂಪರೆಯ ಇತಿಹಾಸವನ್ನು ಗಮನಿಸಿದಾಗ ಪ್ರಾಚೀನ ಕವಿಗಳು ಜನಪದ ರಂಗಭೂಮಿ ನಾಟಕಗಳನ್ನು ಏಕೆ ರಚಿಸಲಿಲ್ಲ ಎಂಬ ಸಂಗತಿ ಇನ್ನೂ ನಿಗೂಢವಾಗಿಯೇ ಇದೆ. ಆದರೆ ಚಾಲುಕ್ಯರ ಮನೆತನದ ಇಮ್ಮಡಿ ಪುಲಿಕೇಶಿಯ ಸೊಸೆ ಚಂದ್ರಾದಿತ್ಯನ ಪತ್ನಿ (ಕ್ರಿ.ಶ. 655–659) ಬಿಜ್ಜಳ ರಾಣಿ (ವಿಜಯ ಮಹಾದೇವಿ) ಕೌಮುದೀ ಮಹೋತ್ಸವ ಎಂಬ ನಾಟಕವನ್ನು ಬರೆದಿರುವುದು ತಿಳಿದು ಬರುತ್ತದೆ. ಆದರೆ ಅದು ಸಂಸ್ಕೃತದಲ್ಲಿ ರಚಿತವಾಗಿದೆ. ನಾಟಕಗಳ ಪ್ರಾಚೀನತೆಯನ್ನು ಗುರುತಿಸಲು ಶಾಸನಗಳು, ಸಾಹಿತ್ಯಿಕ ಉಲ್ಲೇಖಗಳು, ಯಾತ್ರಿಕರ ಪ್ರವಾಸಗ್ರಂಥಗಳು, ಕಲೆ, ಶಿಲ್ಪ ಮೊದಲಾದವುಗಳು ಸಹಾಯವಾಗುತ್ತವೆ.

ಮೈಸೂರಿನ ಅರಸ ಚಿಕ್ಕದೇವರಾಜರ ಆಸ್ಥಾನದಲ್ಲಿದ್ದ ಸಿಂಗರಾರ್ಯನಿಂದ ರಚನೆಯಾದ 'ಮಿತ್ರವಿಂದಾ ಗೋವಿಂದ' (1680) ನಾಟಕವೇ ಕನ್ನಡದಲ್ಲಿ ಲಭ್ಯವಾಗಿರುವ ಪ್ರಥಮ ನಾಟಕ. ಆದರೆ ಇದು ಸಂಸ್ಕೃತದ ಶ್ರೀಹರ್ಷನ ರತ್ನಾವಳೀ ನಾಟಕದ ರೂಪಾಂತರ. "ಇಲ್ಲಿಯ ಹಳಗನ್ನಡವು ಚಿಕ್ಕದೇವರಾಜನ ಕಾಲದಲ್ಲಿ ತಿರುಮಲಾರ್ಯ ಮೊದಲಾದ ಚಂಪೂಕವಿಗಳು ತಮ್ಮ ಕೃತಿಯಲ್ಲಿ ಬಳಸುತ್ತಿದ್ದ ಹೊಸ ಕಾಲದ ಭಾಷೆ ಶೈಲಿಗಳ

ಧೋರಣೆಗೆ ಅನುಗುಣವಾದದ್ದು. ವಸ್ತು ಆ ಕವಿಗಳಿಗೆ ವಿಶೇಷವಾಗಿ ಪರಿಚಿತವೂ ಪ್ರಿಯವೂ ಆಗಿದ್ದ ಭಾಗವತ ವಿಷ್ಣು ಪುರಾಣಗಳಂತಹ ಗ್ರಂಥಗಳಲ್ಲಿ ನಿರೂಪಿತವಾದದ್ದಾಗಿದೆ."[3] ನಾಲ್ಕು ಅಂಕಗಳಲ್ಲಿ ರಚಿತವಾಗಿರುವ ಇದು ಚಂಪೂ ಶೈಲಿಯಲ್ಲಿ ರಚನೆಯಾಗಿದೆ. ಇಲ್ಲಿ ಬಳಕೆಯಾಗಿರುವ ಶಬ್ದಸಂಪತ್ತು ಮತ್ತು ಭಾಷೆಯಿಂದಾಗಿ ಈ ಕವಿಯ ಪಾಂಡಿತ್ಯ ತಿಳಿದು ಬರುತ್ತದೆ.ಸಿಂಗರಾರ್ಯ ನಾಟಕದ ವಸ್ತು ವಾಸುದೇವ-ಮಿತ್ರವಿಂದೆಯರ ಪರಿಣಯ ಭಾಗಕ್ಕೆ ಸೀಮಿತವಾಗಿದೆ. ಇದು ಭಾವುಕ ನಾಟಕವಾಗಿದ್ದರೂ ಕಲ್ಪನೆ ವಾಸ್ತವಗಳೆರಡೂ ಹಿತಮಿತವಾಗಿ ಬಳಕೆಯಾಗಿವೆ. "ಕರ್ನಾಟಕದಲ್ಲಿ ಪ್ರಥಮ ನಾಟಕವೇ ಮಿತ್ರವಿಂದಾ ಗೋವಿಂದ ಎನ್ನುವವರು ಕ್ರಿ.ಶ. 1600 ಕ್ಕಿಂತ ಮೊದಲೇ ಅಸ್ತಿತ್ವದಲ್ಲಿದ್ದ ಯಕ್ಷಗಾನ ಪ್ರಸಂಗಗಳು ಕನ್ನಡ ನಾಟಕದ ರೂಪವಲ್ಲವೆಂದು ಏತಕ್ಕೆ ತರ್ಕಿಸಬೇಕೋ ನಾನು ತಿಳಿಯೆ" ಎಂದು ಶಿವರಾಮಕಾರಂತರು ಪ್ರಶ್ನಿಸಿದ್ದಾರೆ. ಕನ್ನಡದ ಮೊದಲ ರಾಷ್ಟ್ರಕವಿ ಗೋವಿಂದಪೈರವರು ತಮ್ಮ 'ಕನ್ನಡ ನಾಟಕದ ಹಳಮೆ' ಎಂಬ ಲೇಖನವೊಂದರಲ್ಲಿ. "ಕ್ರಿ.ಶ. 9-10ನೇ ಶತಮಾನದಿಂದ ಕುಮಾರವ್ಯಾಸನ ಕಾಲದವರೆಗೆ ಕೆಲವಾದರೂ ನಾಟಕಗಳು ಕನ್ನಡದಲ್ಲಿ ಇದ್ದಿರಬೇಕು. ಆದರೆ ಕಾಲಕ್ರಮದಲ್ಲಿ ನಷ್ಟವಾಗಿರಬೇಕು ಇಲ್ಲವೆ ಇನ್ನು ಗುಪ್ತವಾಗಿರಬೇಕು"[4] ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಇದೇನೆಯಿದ್ದರೂ ನಾವು ಮಿತ್ರವಿಂದಾ ಗೋವಿಂದವನ್ನೆ ಕನ್ನಡದ ಮೊದಲ ನಾಟಕವೆಂದು ಸದ್ಯಕ್ಕೆ ಒಪ್ಪಬಹುದಾಗಿದೆ.

**(ಇ) ಅನುವಾದಿತ ಸಂಸ್ಕೃತ ನಾಟಕಗಳು:**

1680 ರ ಅನಂತರ ಸುಮಾರು ಎರಡು ಶತಮಾನಗಳ ಕಾಲ ಕನ್ನಡ ಸಾಹಿತ್ಯದಲ್ಲಿ ನಾಟಕಗಳು ರಚನೆಯಾಗಿರುವುದು ಕಂಡುಬಂದಿಲ್ಲ. 19ನೇ ಶತಮಾನದ ಕೊನೆಯಲ್ಲಿ ಸಂಸ್ಕೃತ ನಾಟಕಗಳ ಭಾಷಾಂತರ ನಾಟಕಗಳ ಸುಗ್ಗಿಯ ಸಂಭ್ರಮ ಪ್ರಾರಂಭವಾಯಿತು. ಕಾಳಿದಾಸನ ಶಾಕುಂತಲ ನಾಟಕವನ್ನು ಚುರಮುರಿ ಶೇಷಗಿರಿರಾಯರು 1869 ರಲ್ಲಿ ಕನ್ನಡಕ್ಕೆ ತಂದರು. ಆಗಿನ ಕಾಲದ ಪ್ರೇಕ್ಷಕರ ಆಸಕ್ತಿಗನುಗುಣವಾಗಿ ಕಾಳಿದಾಸನ ಗದ್ಯ ಸಂಭಾಷಣೆಯನ್ನು ಅಲ್ಲಲ್ಲಿ ಉತ್ತರ ಕರ್ನಾಟಕದ ದೇಶೀ ಹಾಡಿನ ಪರಂಪರೆಗೆ ಪೂರಕವಾಗಿ ಹಾಡಿನ ಮೆರಗನ್ನು ನೀಡಿದ್ದಾರೆ. ಇದರಿಂದಾಗಿ ಜನರ ಸಂಗೀತದ ಒಲವಿಗೆ ಸ್ಪಂದಿಸುವ ಸಂದರ್ಭ ಸೃಷ್ಟಿಯಾಯಿತು.

ಹತ್ತೊಂಬತ್ತನೆಯ ಶತಮಾನದ ಕೊನೆಯಲ್ಲಿ ಚುರಮುರಿ ಶೇಷಗಿರಿರಾಯರು ಮತ್ತು ಬಸವಪ್ಪಶಾಸ್ತ್ರಿಗಳಿಂದ ಆರಂಭವಾಗಿ ಆಧುನಿಕ ನಾಟಕ ಪರಂಪರೆಯು ನವೋದಯದವರೆಗೂ ಭಾಷಾಂತರ ನಾಟಕಗಳೇ ಕನ್ನಡ ರಂಗಭೂಮಿಯಲ್ಲಿ ವಿಜೃಂಭಿಸಿದವು. ಮೈಸೂರಿನಲ್ಲಿ ಅಸ್ತಿತ್ವಕ್ಕೆ ಬಂದ "ಶ್ರೀ ಚಾಮರಾಜೇಂದ್ರ ಕರ್ನಾಟಕದ ನಾಟಕ ಸಭೆಯ ಕೋರಿಕೆಯನ್ನು ಪೂರೈಸಲು ಅರಮನೆಯ ವಿದ್ವಾಂಸರು ನಾಟಕಗಳನ್ನು ರಚಿಸಲು ಮುಂದಾದರು"[5]. ಅವರಲ್ಲಿ ಪ್ರಮುಖರಾದವರು ಬಸವಪ್ಪಶಾಸ್ತ್ರಿಗಳು. ಇವರು

'ಶಾಕುಂತಲ', 'ವಿಕ್ರಮೋರ್ವಶೀಯು', 'ರತ್ನಾವಳಿ', 'ಉತ್ತರ ರಾಮಚರಿತ್ರೆ', 'ಮಾಲತೀಮಾಧವ', 'ಚಂಡಕೌಶಿಕ' ಮುಂತಾದ ಸಂಸ್ಕೃತದ ನಾಟಕಗಳನ್ನು ಭಾಷಾಂತರಿಸಿದರು. ಈಪೈಕಿ ಶಾಸ್ತ್ರಿಗಳು ಅನುವಾದಿಸಿದ ಶಾಕುಂತಳ (1883) ಕನ್ನಡ ನಾಟಕ ಇತಿಹಾಸದಲ್ಲಿ ವಿಶಿಷ್ಟ ಸ್ಥಾನಗಳಿಸಿತು.

ಸಂಸ್ಕೃತ ನಾಟಕಗಳನ್ನು ಕನ್ನಡಿಸಿದವರಲ್ಲಿ ಉತ್ತರ ಕರ್ನಾಟಕದ ಧೊಂಡೋನರಸಿಂಹ ಮುಳಬಾಗಿಲರು ಪ್ರಮುಖರು. 'ಉತ್ತರ ರಾಮಚರಿತ್ರೆ' 'ಮೃಚ್ಛಕಟಿಕ' 'ವೇಣೀ ಸಂಹಾರ' 'ಮಾಳವಿಕಾಗ್ನಿಮಿತ್ರ' ಗಳನ್ನು ಅನುವಾದಿಸಿದ್ದಾರೆ. ಜಯರಾಮಾಚಾರ್ಯರು 'ಚಂಡ ಕೌಶಿಕ' 'ವೇಣೀ ಸಂಹಾರ'ವನ್ನು ಕನ್ನಡಿಸಿದ್ದಾರೆ. 'ಮೃಚ್ಛಕಟಿಕವನ್ನು ಹಾಗೂ ಹರ್ಷವರ್ಧನನ 'ನಾಗಾನಂದ'ವನ್ನು ಗರಣಿ ವೈ ಕೃಷ್ಣಾಚಾರ್ಯರು ಅನುವಾದಿಸಿದ್ದಾರೆ. 'ನಾಗಾನಂದ' ನಾಟಕವನ್ನು 'ಕರ್ನಾಟಕ ನಾಗಾನಂದ' ವೆಂದು ಮೈಸೂರಿನ ಅನಂತ ನಾರಾಯಣ ಶಾಸ್ತ್ರಿಗಳು ಅನುವಾದಿಸಿದ್ದಾರೆ. ನಂಜನಗೂಡು ಶ್ರೀಕಂಠಶಾಸ್ತ್ರಿಗಳು 'ಪ್ರಿಯದರ್ಶಿಕಾ' ನಾಟಕವನ್ನು ಕನ್ನಡಿಸಿದ್ದಾರೆ. ಭಾಸನ 'ಸ್ವಪ್ನವಾಸವದತ್ತ' ವನ್ನು ದೇವಶಿಖಾಮಣಿ ಅಳ ಸಿಂಗರಾಚಾರ್ಯರು 'ಪ್ರತಿಮಾನಾಟಕ' ವನ್ನು ಮೈಸೂರಿನ ಸೀತಾರಾಮಶಾಸ್ತ್ರಿಗಳು ಅನುವಾದಿಸಿದರು. 'ದೂತವಾಕ್ಯ' ವನ್ನು ಕಡಬದ ನಂಜುಂಡಶಾಸ್ತ್ರಿ ಮತ್ತು ಕೆ.ಆರ್.ರಾಮಸ್ವಾಮಿಗಳು ಅನುವಾದಿಸಿದರು. ಎಂ.ಎಲ್ ಶ್ರೀಕಂಠೇಶಗೌಡರು ಸಂಸ್ಕೃತದ ಜಾನಕಿ ಪರಿಣಯವನ್ನು ಆಧರಿಸಿ 'ಸೀತಾಸ್ವಯಂವರ' (1901) ಎಂಬ ಸಂಸ್ಕೃತನಾಟಕ ರಚಿಸಿದರು.

**(ಈ) ರೂಪಾಂತರಿತ ಇಂಗ್ಲಿಷ್ ನಾಟಕಗಳು**

ಸಂಸ್ಕೃತದ ಜೊತೆಗೆ ತಮಿಳು, ಮರಾಠಿ, ಹಿಂದುಸ್ಥಾನಿ ತೆಲುಗುನಾಟಕಗಳು ಅನುವಾದವಾಗಿವೆಯಾದರೂ ಇಂಗ್ಲಿಷ್ ರೂಪಾಂತರಗಳು ಪ್ರಮುಖವಾಗುತ್ತವೆ. "ಇಂಗ್ಲಿಷ್ ಭಾಷೆಯಿಂದ ಕನ್ನಡಕ್ಕೆ ಸಾಹಿತ್ಯ ಕೃತಿಯೊಂದನ್ನು ಅನುವಾದಿಸುವಾಗ ಎದುರಾಗುವ ತೊಡಕುಗಳು ತೀರಾ ಭಿನ್ನವಾಗಿರುತ್ತವೆ. ನಮ್ಮ ಜಾಯಮಾನಕ್ಕೆ ಒಗ್ಗದ ಅನೇಕ ನುಡಿಗಟ್ಟುಗಳು ಅಲ್ಲಿವೆ. ಶಬ್ದಸಂಪತ್ತಿನ ದೃಷ್ಟಿಯಿಂದಲೂ ಇಂಗ್ಲಿಷ್ ಕನ್ನಡವನ್ನು ಹೋಲಿಸುವಂತಿಲ್ಲ. ಸಾಂಸ್ಕೃತಿಕವಾಗಿ ಇವೆರಡೂ ಭಾಷೆಗಳು ತೀರ ಭಿನ್ನವಾದ ಮೂಲಕ್ಕೆ ಸೇರುತ್ತವೆ".[6] ಇಂಗ್ಲಿಷ್ ನಾಟಕವನ್ನು ಅನುವಾದ ಮಾಡಿದ ಕೆಲವರು ಇಂಗ್ಲಿಷ್ ಸಹಾಯವನ್ನು ಪಡೆದುಕೊಂಡು ತಮ್ಮ ಕೆಲಸ ಸಾಧಿಸಿದರು. ಬಹುತೇಕ ಹಲವರು ಅನುವಾದಕ್ಕೆ ಬದಲಾಗಿ ರೂಪಾಂತರಕ್ಕೆ ಮೊರೆಹೋದರು.

"ಬಸವಪ್ಪಶಾಸ್ತ್ರಿಗಳು ಇಂಗ್ಲಿಷ್ ಬಲ್ಲವರ ಸಹಾಯದಿಂದ 'ಒಥೆಲೊ' ನಾಟಕವನ್ನು 'ಶೂರಸೇನ ಚರಿತ್ರೆ' ಎಂದು ರೂಪಾಂತರಿಸಿದರು. 'ಕಿಂಗ್‌ಲಿಯರ್' ನಾಟಕವನ್ನು

'ಹೇಮಚಂದ್ರವಿಲಾಸ' ಎಂಬ ಹೆಸರಿನಿಂದ ಎಂ.ಎಸ್.ಪುಟ್ಟಣ್ಣನವರು ರೂಪಾಂತರಿಸಿದರು. ಸಿ.ಆನಂದರಾಯರು 'ರೋಮಿಯೋ ಜ್ಯೂಲಿಯಟ್'ನ್ನು 'ರಾಮವರ್ಮಲೀಲಾವತಿ' ಎಂದು ರೂಪಾಂತರಿಸಿದ್ದಾರೆ. ಕೆರೂರು ವಾಸುದೇವಾಚಾರ್ಯರು ಇದೇ ನಾಟಕವನ್ನು 'ರಮೇಶ-ಲಲಿತ' ಎಂದು ಕನ್ನಡೀಕರಿಸಿದರು. 'ಎ ಮಿಡ್‌ಸಮ್ಮರ್ ನೈಟ್ಸ್ ಡ್ರೀಮ್'ಅನ್ನು 'ವಸಂತಯಾಮಿನೀ ಸ್ವಪ್ನ ಚಮತ್ಕಾರ' ವೆಂದು ತಂದರು. ಡೆಪ್ಯುಟಿ ಚನ್ನಬಸಪ್ಪನವರು ನಗಿಸುವ ಕಥೆ' ಎಂಬುದಾಗಿ ರೂಪಾಂತರಿಸಿದರು. ಎಂ.ಎಲ್.ಶ್ರೀಕಂಠೇಗೌಡರು ಷೇಕ್ಸ್‌ಪಿಯರ್‌ನ ರುದ್ರನಾಟಕವಾದ 'ಮ್ಯಾಕಬೆತ್'ನ್ನು 'ಪ್ರತಾಪರುದ್ರದೇವ' (1895) ಎಂದು, ಪ್ರಹಸನವಾದ 'ಎ ಮಿಡ್‌ಸಮ್ಮರ್ ನೈಟ್ಸ್ ಡ್ರೀಮ್'ನ್ನು (1896) 'ಪ್ರಮೀಳಾರ್ಜುನೀಯ' ಎಂದು ರೂಪಾಂತರಿಸಿದ್ದಾರೆ".[7]

**ನಾಟಕದ ಕಂಪನಿ ಪ್ರಾರಂಭ**

ಕನ್ನಡದ ಕರಾವಳಿ ಭಾಗವತರಾಟಗಳು ಕ್ರಿ.ಶ. 1840ರ ಕಾಲಘಟ್ಟದಲ್ಲಿಯೂ ಹೆಚ್ಚೆಚ್ಚು ನಡೆಯುತ್ತಿದ್ದವು. ಇದರಿಂದ ಪ್ರಭಾವಿತನಾದ ಸಾಂಗ್ಲಿ ಸಂಸ್ಥಾನದ ಆಶ್ರಯದಲ್ಲಿದ್ದ ಚತುರ ಕರಣಿಕನಾದ ವಿಷ್ಣುಪಂತ ಭಾವೆ ಎಂಬುವನು ಮರಾಠಿ ನಾಟಕಗಳನ್ನು ರಚಿಸಿ ಆಡಲು ಪ್ರಾರಂಭಿಸಿದ. ಪ್ರೇಕ್ಷಕರ ಪ್ರೋತ್ಸಾಹ ಗಮನಿಸಿ "ಸಾಂಗ್ಲೀಕರ್ ಸಂಗೀತ ನಾಟಕ ಮಂಡಳಿ" ಎಂಬ ಹೆಸರಿನಿಂದ ಮಹಾರಾಷ್ಟ್ರದ ಜೊತೆಗೆ ಉತ್ತರಕರ್ನಾಟಕದ ಪ್ರಮುಖ ಪಟ್ಟಣಗಳಲ್ಲೂ ನಾಟಕಗಳನ್ನಾಡತೊಡಗಿದನು. 1850ರ ಸಂದರ್ಭದಲ್ಲಿ ಮರಾಠೀ ನಾಟಕಗಳ ಅಲೆ ಆರಂಭವಾಯಿತು. ಪ್ರೇಕ್ಷಕರು ಹೊಸ ಬಗೆಯ ಕಥೆಗಳ ಕಡೆಗೆ ತಮ್ಮ ಆಸಕ್ತಿ ಬೆಳಸಿಕೊಂಡು. ರಂಗಮಂದಿರದ ಕಡೆಗೆ ಬರತೊಡಗಿದರು. ಕನ್ನಡ ರಂಗಭೂಮಿಯು ತನ್ನತನವನ್ನು ಉಳಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಈ ಬೆಳವಣಿಗೆಯಿಂದಾಗಿ ಕನ್ನಡದ ರಂಗಭೂಮಿಯ ಮೇಲೆ ಆಸಕ್ತಿ ಹೊಂದಿದ್ದವರೆಲ್ಲರು ನಿರಾಶರಾದರು. ಈ ಹಿನ್ನೆಲೆಯಲ್ಲಿ ಕನ್ನಡ ರಂಗಚಟುವಟಿಕೆಗಳು ಅನಿವಾರ್ಯವಾದವು.

'ಶಾಂತಕವಿ'ಗಳೆಂದೇ ಪ್ರಸಿದ್ಧರಾದ ಸಕ್ಕರಿಬಾಳಾಚಾರ್ಯರು ಮರಾಠಿರಂಗದಿಂದ ಪಾಠಕಲಿತರು. ಕರಾವಳಿಯ ಯಕ್ಷಗಾನಗಳಲ್ಲಿ ಆಸಕ್ತಿಹೊಂದಿ ಅವುಗಳಿಂದ ಸ್ಫೂರ್ತಿಗೊಂಡಿದ್ದ ಇವರು ಅದೇ ರೀತಿಯಲ್ಲಿ ಹೊಸನಾಟಕಗಳನ್ನು ರಚಿಸಿ ಕಲಾವಿದರಿಗೆ ತರಬೇತಿ ನೀಡಿ. ಕನ್ನಡದಲ್ಲಿಯೇ ಹೊಸ ಪ್ರಯೋಗಗಳನ್ನು ನಡೆಸಿ ಮರಾಠಿ ನಾಟಕಗಳ ಕಡೆಗೆ ಮಾರುಹೋಗಿದ್ದವರನ್ನು ಕನ್ನಡದ ರಂಗಭೂಮಿಯ ಕಡೆಗೆ ಆಕರ್ಷಿಸಿದರು".[8] ಹೀಗೆ "ಕರ್ನಾಟಕದಲ್ಲಿ ರಂಗಭೂಮಿ ವೃತ್ತಿನಿರತವಾಗಿ 1877ರಲ್ಲಿ ಸ್ಥಾಪನೆಯಾಯಿತು".

**(ಅ) ಗದುಗಿನ ಶ್ರೀ ವೀರನಾರಾಯಣ ಪ್ರಾಸಾದಿತ ಕೃತಪುರ ನಾಟಕ ಮಂಡಳಿ**

ಗದುಗಿನ ಉತ್ಸಾಹಿಗಳು, ಶ್ರೀಮಂತರು ಆದ ಉಮಚಗಿ ಲಚ್ಚಪ್ಪನಾಯಕರು ಶಾಂತಕವಿಗಳ ಮನವಿಯ ಮೇರೆಗೆ ಈ ನಾಟಕಮಂಡಳಿಯನ್ನು ಪ್ರಾರಂಭಿಸಿದರು.

ಸ್ವತಃ ಶಾಂತಕವಿಗಳೇ ಈ ಸಂಸ್ಥೆಗಾಗಿ ನಾಟಕಗಳನ್ನು ಬರೆಯತೊಡಗಿದರು. ಮೊದಲಿಗೆ 'ಉಷಾಹರಣ' ನಾಟಕವನ್ನು ಬರೆದು ಅಭಿನಯಿಸಿದರು. "ಗುಡಿ ರಾಘವೇಂದ್ರಾಚಾರ್ಯ, ಹಂಪಿ ಹೊಳಿಶಂಕರಭಟ್ಟ, ಅಸುಂಡಿವೆಂಕಟಪ್ಪ., ದೋಣಿ ರಂಗಪ್ಪ, ಕಳಕಲ್ಲ ಗುರುಲಿಂಗಪ್ಪ, ಯಜ್ಞೇಶ್ವರ ಪಂತ, ಕೊಣ್ಣೂರು ಜೀವುಬಾಳಪ್ಪ, ಕುನ್ನಿ ಇಮ್ಮಣ್ಣ,"[9] ಮುಂತಾದವರು ಕಲಾವಿದರಾಗಿ ಅಭಿನಯಿಸಿದರು. 'ಸುಧನ್ವವಧ' 'ಸೀತಾರಣ್ಯಪ್ರವೇಶ' 'ವತ್ಸಲಾಹರಣ' 'ಕೀಚಕವಧ' ಸೀಯಾಳ ಸತ್ವಪರೀಕ್ಷೆ' ಮುಂತಾದ ನಾಟಕಗಳನ್ನು ಒಳಗೊಂಡಂತೆ ಮೂವತ್ತೈದು ನಾಟಕಗಳನ್ನು ರಚಿಸಿದ್ದಾರೆ. ನಾಟಕ ಕಂಪನಿಯಲ್ಲಿ ಶಾಂತಕವಿಗಳೇ ನಾಟಕ ಮಾಸ್ತರರೂ ಕೂಡ ಆಗಿದ್ದರು. ಈ ಕಾರಣಕ್ಕಾಗಿಯೇ ಅವರನ್ನು 'ಕನ್ನಡದ ನಾಟಕದ ಪ್ರಥಮ ಗುರು' ಎಂದು ಜನ ಕರೆದರು. ಈ ಪ್ರಭಾವದಿಂದಾಗಿ ಅನೇಕ ವೃತ್ತಿ ನಾಟಕಗಳನ್ನು ರಚಿಸತೊಡಗಿದರು. ಈ ಮಂಡಳಿಯು ಪ್ರಾರಂಭದಲ್ಲಿ ಧಾರವಾಡ, ಬೆಳಗಾಂ, ನವಲಗುಂದ, ಹುಬ್ಬಳ್ಳಿ, ಸವದತ್ತಿ ಮೊದಲಾದ ಕಡೆ ನಾಟಕವನ್ನು ಅಭಿನಯಿಸಿತು. ಈ ಸಂಸ್ಥೆಯು ಆಧುನಿಕತೆಗೆ ಒಪ್ಪುವಂತೆ ವ್ಯವಸ್ಥಿತ ರಂಗಮಂದಿರ, ವೇಷ-ಭೂಷಣಗಳನ್ನು ಅಳವಡಿಸಿಕೊಂಡರು. ಈ ಹಿನ್ನೆಲೆಯಲ್ಲಿ ಮರಾಠಿ ಮತ್ತು ಪಾರ್ಸಿ ಕಂಪನಿಗಳ ಪ್ರಭಾವವಿದ್ದರೂ, ಕನ್ನಡ ಜಾನಪದ ಸಂಪ್ರದಾಯವನ್ನು ಕೈ ಬಿಡಲಿಲ್ಲ.

ಗುಡಿ ರಾಘವೇಂದ್ರಾಚಾರ್ಯರು ಭೀಮ, ಘಟೋದ್ಗಜ ಮೊದಲಾದ ಪ್ರಮುಖ ಪಾತ್ರಗಳನ್ನು ಅಭಿನಯಿಸುತ್ತಿದ್ದರು. ಇವರ ಅಭಿನಯದ ಪ್ರಭಾವದಿಂದಾಗಿ ರಂಗಮಂದಿರದ ತುಂಬ ಜನ ಕಿಕ್ಕಿರಿದು ಸೇರುತ್ತಿದ್ದರು. ಡಂಬಳ ಹುಚ್ಚಾಚಾರ್ಯರಿಗೆ ನಾಯಕಿಯ ಪಾತ್ರ ಮೀಸಲಾಗಿರುತ್ತಿತ್ತು. ಕೊಣ್ಣೂರು ಜೀವೂಬಾಳಪ್ಪನವರು ಸೂತ್ರಧಾರನ ಪಾತ್ರ ನಿರ್ವಹಿಸುತ್ತಿದ್ದರು. ಸೂತ್ರಧಾರನ ಪ್ರವೇಶದ ನಂತರ "ಬೇವಿನ ಸೊಪ್ಪಿನಿಂದಲಂಕೃತವಾದ ವಿದೂಷಕ ಕೋಡಂಗಿಗಳ ಕುಣಿತ, ಮುಂದೆ ಗಣೇಶ, ಶಾರದೆಯಂತಹ ದೇವತೆಗಳು ಪ್ರವೇಶಿಸಿ ನಾಟಕವು ನಿರ್ವಿಘ್ನವಾಗಿ ನಡೆಯಲೆಂದು ಹರಸುತ್ತಿದ್ದರು"[10]. ಶಾಂತಕವಿಗಳು ಕಲಾವಿದರಲ್ಲಿ ಶಿಸ್ತನ್ನು ಬೆಳಸಿದ್ದರು. ಕೆಲವೇ ವರ್ಷಗಳಲ್ಲಿ ಈ ಕಂಪನಿ ಹೆಚ್ಚು ಹೆಸರುಗಳಿಸಿಕೊಳ್ಳುವುದರ ಜೊತೆಗೆ ಹಣವನ್ನು ಗಳಿಸಿಕೊಂಡಿತು. ಸಾಹಿತ್ಯ ಹಾಗೂ ಅಭಿನಯ ಇವೆರಡರ ದೃಷ್ಟಿಯಿಂದಲೂ ಶಾಂತಕವಿಗಳ ನಾಟಕ ಮಂಡಳಿ ಹೆಸರುಗಳಿಸಿತು. ಸುಮಾರು ಹದಿನಾರು ವರ್ಷಗಳ ಕಾಲ ಸತತವಾಗಿ ನಾಟಕಗಳನ್ನಾಡಿದ ಮೇಲೆ 1894-95ರಲ್ಲಿ ಅದರ ಪ್ರಮುಖ ನಟರು ತೀರಿಕೊಂಡಾಗ ನಾಟಕ ಮಂಡಳಿ ಅವಸಾನ ಕಂಡಿತು. ಶಾಂತಕವಿಗಳಿಂದ ಪ್ರಭಾವಿತರಾಗಿ ಉತ್ತರಕರ್ನಾಟಕದಲ್ಲಿ "ಧಾರವಾಡ, ರಾಣಿಬೆನ್ನೂರು, ಹಿರೇಕೆರೂರ, ಲಕ್ಷ್ಮೇಶ್ವರ, ಹುಬ್ಬಳ್ಳಿ, ಕೌಜಲಗಿ, ನವಲಗುಂದ, ನರಗುಂದ, ಹಲಸಿಗಿ, ಬಾದಾಮಿ, ಹಾಗೂ ರಬಕವಿಗಳಲ್ಲಿ ನಾಟಕಮಂಡಳಿಗಳು ಸ್ಥಾಪನೆಯಾದವು."[11] ಹಾಗೆಯೇ ಮೈಸೂರು ಪ್ರಾಂತ್ಯದಲ್ಲಿಯು ಮರಾಠಿ ನಾಟಕಗಳ ಪ್ರಭಾವವನ್ನು ತಡಗಟ್ಟಲು 1879-80ರಲ್ಲಿ ಸಿ.ಆರ್.ರಘುನಾಥರಾಯರು 'ಶಾಕುಂತಲ ಕರ್ನಾಟಕ ಸಭಾ' ಎಂದು

ಹೆಸರಿಟ್ಟು ಕಾರ್ಯಪ್ರವೃತ್ತರಾದರು. ನಂತರ ಮೈಸೂರಿನ ಅರಸರಾದ ಚಾಮರಾಜೇಂದ್ರ ಒಡೆಯರ್ ಕಂಪನಿಯೊಂದನ್ನು ಹುಟ್ಟುಹಾಕುವ ಮೂಲಕ ಮೈಸೂರಿನಲ್ಲಿ ರಂಗಭೂಮಿಯ ಉದಯವಾಯಿತು.

**(ಆ) ಶ್ರೀ ಚಾಮರಾಜೇಂದ್ರ ಕರ್ನಾಟಕ ನಾಟಕ ಸಭಾ – ಮೈಸೂರು**

1880ರಲ್ಲಿ ಚಾಮರಾಜೇಂದ್ರರು ತಮ್ಮ ಆಶ್ರಯದಲ್ಲಿದ್ದ ನಾಟಕ ಮಂಡಳಿಯನ್ನು ಸ್ಥಾಪಿಸಿ ಕನ್ನಡ ರಂಗಭೂಮಿಗೆ ಭದ್ರವಾದ ಬುನಾದಿಯನ್ನು ಹಾಕಿದರು. "ಅರಮನೆಗೆ ಸೇರಿದ ರಾಯಲ್ ಪಾಠಶಾಲೆಯ ವಿದ್ಯಾರ್ಥಿಗಳಿಂದ ಶಾಲೆಯ ಮುಖ್ಯೋಪಾಧ್ಯಾಯರ ಮುಂದಾಳತ್ವದಲ್ಲಿ 'ಪ್ರಹ್ಲಾದ' ಎಂಬ ಮೊದಲ ನಾಟಕವನ್ನು ಅಭಿನಯಿಸಿದರು. ಶಾಲೆಯ ಉಪಾಧ್ಯಾಯ ವರ್ಗದವರು 'ಫಿನಿಷ್ಡ್ ಅಪಾರ್ಟ್‌ಮೆಂಟ್ಸ್' ಎಂಬ ಇಂಗ್ಲಿಷ್ ನಾಟಕವನ್ನು ವಿದ್ಯಾರ್ಥಿ ನಟರಿಂದ ಸಿದ್ಧಗೊಳಿಸಿದರು".[12] ಇವೆರಡು ನಾಟಕಗಳಿಂದಾಗಿ ಪ್ರಭಾವಿತರಾದ ಚಾಮರಾಜೇಂದ್ರ ತಮ್ಮ ಆಸ್ಥಾನದಲ್ಲಿದ್ದ ಉತ್ತಮ ಕಲಾವಿದರನ್ನೆಲ್ಲಾ ಬಳಸಿಕೊಂಡು, ಕೆಲವರನ್ನು ಮುಂಬೈಗೆ ಕಳುಹಿಸಿ ಅಲ್ಲಿನ ರಂಗ, ವಾಸ್ತುಶಿಲ್ಪ, ಪರದೆಗಳು, ವೇಷಭೂಷಣಗಳ ಕ್ಷೇತ್ರದಲ್ಲಿ ತರಬೇತಿ ಕೊಡಿಸಿದರು. ಆಸ್ಥಾನ ವಿದ್ವಾಂಸರೂ ಕವಿಗಳು ಆಗಿದ್ದ ಬಸವಪ್ಪಶಾಸ್ತ್ರಿ, ಸೋಸಲೆ ಅಯ್ಯಾಶಾಸ್ತ್ರಿ, ನಂಜನಗೂಡು ಸುಬ್ಬಾಶಾಸ್ತ್ರಿ, ಜಯರಾಯಾಚಾರ್ಯ, ಮೊದಲಾದವರಿಗೆ ನಾಟಕಗಳನ್ನು ರಚಿಸುವ ಜವಾಬ್ದಾರಿಯನ್ನು ಹೊರಿಸಲಾಯಿತು. ದಿವಾನ್ ಸಿ.ರಂಗಚಾರ್ಲುರವರು ಈ ಎಲ್ಲ ಬೆಳವಣಿಗೆಗೆ ಶ್ರಮವಹಿಸಿದರು.

ಬಸವಪ್ಪಶಾಸ್ತ್ರಿಗಳು ಕಾಳಿದಾಸನ ಶಾಕುಂತಲ ನಾಟಕವನ್ನು ಕನ್ನಡಕ್ಕೆ ಅನುವಾದಿಸಿದರು. 1881ರಲ್ಲಿ ನಾಟಕವನ್ನು ಪ್ರದರ್ಶಿಸಲಾಯಿತು. ಜನರಿಂದ ಉತ್ತಮ ಪ್ರತಿಕ್ರಿಯೆ ಸಿಕ್ಕಿತು. ನಾಟಕ ಪ್ರದರ್ಶನ ಮೈಸೂರಿಗಷ್ಟೆ ಸೀಮಿತವಾಗದೆ ಬೆಂಗಳೂರು, ಧಾರವಾಡ, ಬೆಳಗಾವಿ, ಬಳ್ಳಾರಿಗಳಲ್ಲಿಯೂ ನಡೆಯಿತು. ಅನಂತರ ವಿ. ಆನಂದರಾಯರು ಷೇಕ್ಸ್‌ಪಿಯರ್‌ನ 'ರೋಮಿಯೊ ಅಂಡ್ ಜೂಲಿಯಟ್ ' ಮತ್ತು 'ಮರ್ಚೆಂಟ್ ಆಫ್ ವೆನಿಸ್' ನಾಟಕಗಳನ್ನು ಕನ್ನಡಕ್ಕೆ ಅನುವಾದಿಸಿದರು. ಸೋಸಲೆ ಅಯ್ಯಾಶಾಸ್ತ್ರಿಗಳು 'ಚಂಡಕೌಶಿಕ' ಸುಬ್ಬಾಶಾಸ್ತ್ರಿಗಳು 'ಮೃಚ್ಛಕಟಿಕ' ಬಸವಪ್ಪಶಾಸ್ತ್ರಿಗಳು 'ಉತ್ತರರಾಮಚರಿತೆ' 'ಮಾಲತೀಮಾಧವ' ನಾಟಕಗಳನ್ನು ಅನುವಾದಿಸಿಕೊಟ್ಟರು. ಅನಂತರದಲ್ಲಿ ಕನ್ನಡ ನಾಡಿನ ಜನತೆ ಮರಾಠಿ ಹಾಗೂ ಪಾರ್ಸಿ ಕಂಪನಿಗಳ ಆಕರ್ಷಣೆಯಿಂದ ಮುಕ್ತರಾದರು. ನಾಡಿನಾದ್ಯಂತ ಹೊಸ ಹೊಸ ಸಂಸ್ಥೆಗಳು ಹುಟ್ಟಿಕೊಂಡವು.

**(ಇ) ರಾಜಧಾನಿ ನಾಟಕ ಮಂಡಳಿ, ಮೈಸೂರು**

1881 ರಲ್ಲಿ ಮಂಡ್ಯರಂಗಾಚಾರ್ಯರು ಹಾಗೂ ಅವರ ಗೆಳೆಯರೂ ಸೇರಿ ಸ್ಥಾಪಿಸಿದ ನಾಟಕ ಮಂಡಳಿ ಇದು. ಚಾಮರಾಜೇಂದ್ರ ನಾಟಕ ಸಭೆಗೂ ಇದಕ್ಕೂ

ಒಳ್ಳೆಯ ಪೈಪೋಟಿಯಿತ್ತು. 'ಬಾಣಾಸುರೋಪಾಖ್ಯಾನ' ಎಂಬ ನಾಟಕವನ್ನು ಪ್ರಾರಂಭದಲ್ಲಿ ಅಭಿನಯಿಸಿದರು. ನಂತರ 'ಇಂದ್ರಸಭಾ' 'ಲೈಲಾಮಜನೂ' ಗಳೆಂಬ ನಾಟಕಗಳು ಹೆಚ್ಚು ಮೆಚ್ಚುಗೆ ಪಡೆದವು. ರಂಗಾಚಾರ್ಯರು ಶೂರಸೇನ ಚರಿತೆಯ 'ಶೂರಸೇನ', ರಾಮವರ್ಮ, ಲೀಲಾವತಿಯ 'ರಾಮವರ್ಮ', ವೇಣೀ ಸಂಹಾರದ 'ಅಶ್ವತ್ಥಾಮ' ನಾಗಿ ಕಾಣಿಸಿಕೊಂಡರು. ಸ್ತ್ರೀ ಪಾತ್ರಗಳಲ್ಲಿ ವರನಟ ಲಕ್ಷ್ಮೀಪತಿ ಶಾಸ್ತ್ರಿಯವರೂ ಮಿಂಚಿದರು. "ಶ್ರೀನಿವಾಸಯ್ಯಂಗಾರರ 'ರತ್ನಾವಳಿ' 'ಸತ್ಯವರ್ಮ' 'ಹರಿಶ್ಚಂದ್ರ' ಎಸ್.ಜಿ. ನರಸಿಂಹಾಚಾರ್ಯರ 'ಶಾಕುಂತಲ' 'ಚಂದ್ರಹಾಸ' ಎ.ಆನಂದರಾಯರ 'ರಾಮವರ್ಮ ಲೀಲಾವತಿ' ಮಾದಪ್ಪಶಾಸ್ತ್ರಿಗಳ 'ಮಕರಂದಿಕಾ ಪರಿಣಯ' ಅವರು ಅಭಿನಯಿಸುತ್ತಿದ್ದ ಕೆಲವು ನಾಟಕಗಳು. ಮೈಸೂರಿನ ವಕೀಲರೂ, ಉದ್ಯೋಗಸ್ಥರೂ, ವ್ಯಾಪಾರಿಗಳು ರಂಗಾಚಾರ್ಯರ ನಾಟಕಮಂಡಳಿಗೆ ಸಹಕಾರ ಕೊಟ್ಟರು. ಧಾರವಾಡ, ಹುಬ್ಬಳ್ಳಿ ಹಾಗು ಬಳ್ಳಾರಿ ಸೀಮೆಗಳಲ್ಲಿ ನಾಟಕ ಪ್ರದರ್ಶಿಸಿದರು. ನಂತರ ಮಂಡಳಿಯ ಕಲಾವಿದರಲ್ಲಿ ಅಸೂಯೆಗಳು ಹುಟ್ಟಿಕೊಂಡವು. ಒಗ್ಗಟ್ಟಿನಿಂದ ಕಲೆತು ದುಡಿಯುವ ಭಾವನೆ ನಾಶವಾಯಿತು. ಇದರಿಂದ ಬೇಸತ್ತ ರಂಗಾಚಾರ್ಯರು ಮಂಡಳಿಯನ್ನು ವಿಸರ್ಜಿಸಿದರು".[13]

### (ಈ) ಗುಬ್ಬಿ ಶ್ರೀ ಚನ್ನಬಸವೇಶ್ವರ ಕೃಪಾಪೋಷಿತ ನಾಟಕ ಮಂಡಳಿ

ಗುಬ್ಬಿ ಚಂದಣ್ಣ, ಅಬ್ದುಲ್ ಅಜೀಜ್ ಹಾಗು ಸಾಹುಕಾರ ನೀಲಕಂಠಪ್ಪನವರು ತುಮಕೂರು ಜಿಲ್ಲೆಯ ಗುಬ್ಬಿ ಕಲಾಭಿಮಾನಿಗಳು. ಇವರೆಲ್ಲಾ ಸೇರಿ 1884ರಲ್ಲಿ ಈ ಮಂಡಳಿಯನ್ನು ಆರಂಭಿಸಿದರು. ಮೊದಲ ನಾಟಕವಾಗಿ ಅಂದಿನ ಪ್ರಸಿದ್ಧ ದೊಡ್ಡಾಟದ ಪ್ರಸಂಗವಾಗಿದ್ದ 'ಕುಮಾರರಾಮನಕಥೆ'ಯನ್ನು ನಾಟಕವಾಗಿ ಪರಿವರ್ತಿಸಿ, ಪ್ರದರ್ಶಿಸಿದರು. ಚಾಮರಾಜೇಂದ್ರ ಒಡೆಯರು ನಾಟಕ ನೋಡಿ ಮೆಚ್ಚಿಕೊಂಡು ಸಂಭಾವನೆಯನ್ನು ನೀಡಿದರು. 1886ರಲ್ಲಿ ಬೆಂಗಳೂರಿನಲ್ಲೂ ನಾಟಕ ಪ್ರದರ್ಶನವಾಯಿತು. ನಂತರ ವೀರಪ್ಪಶಾಸ್ತ್ರಿಗಳಿಂದ 'ಚೋರಕಥೆ' ಎಂಬ ಹೊಸ ನಾಟಕವನ್ನು ಬರೆಸಿದರು. ಇದರ ಪ್ರದರ್ಶನದಿಂದಾಗಿ ಸಂಘಕ್ಕೆ ಮತ್ತಷ್ಟು ಯಶಸ್ಸು ಸಿಕ್ಕಿತು. ಚಂದ್ರಣ್ಣನವರು ಮಾಲೀಕರಾದ ಮೇಲೆ 'ಸತ್ಯಹರಿಶ್ಚಂದ್ರ', 'ಪಾಂಡವ ವಿಜಯ', 'ಇಂದ್ರಸಭಾ' ನಾಟಕಗಳು ಪ್ರದರ್ಶಿತವಾದವು.

ಕರ್ನಾಟಕದ ಹಾಸ್ಯನಟರೆಂದು ಹೆಸರಾದ ಗುಬ್ಬಿ ವೀರಣ್ಣನವರು ತಮ್ಮ ಆರನೆಯ ವಯಸ್ಸಿನಲ್ಲೇ 1896ರಲ್ಲಿ ಕಂಪನಿ ಸೇರಿದರು. ಆಸಕ್ತಿಯಿಂದ ಕಂಪನಿಯಲ್ಲಿ ತಮ್ಮನ್ನು ತೊಡಗಿಸಿಕೊಂಡು ಎಲ್ಲಾ ಪಾತ್ರಗಳನ್ನು ನಿರ್ವಹಿಸಿದರು. ಚಂದ್ರಣ್ಣನವರ ನಿಧನದ ನಂತರ 1920ರ ಹೊತ್ತಿಗೆ ಕಂಪನಿಯ ಪೂರ್ಣ ಮಾಲೀಕತ್ವವನ್ನು ವೀರಣ್ಣನವರು ಪಡೆದರು. 1930ರ ಹೊತ್ತಿಗೆ ದಕ್ಷಿಣ ಭಾರತದ ಪ್ರವಾಸವನ್ನು ಮುಗಿಸಿ ವೀರಣ್ಣನವರು ಬೆಂಗಳೂರಿನಲ್ಲಿ ಮತ್ತೊಂದು ನಾಟಕ ಶಾಲೆಯನ್ನು ನಿರ್ಮಿಸಿದರು. ದಕ್ಷಿಣ ಭಾರತದ ಪ್ರಮುಖ ಪಟ್ಟಣಗಳಲ್ಲಿ ನಾಟಕವನ್ನು ಪ್ರದರ್ಶಿಸಿದರು. "1934ರಲ್ಲಿ ಸಂಸ್ಥೆಯ ಸುವರ್ಣ

ಮಹೋತ್ಸವವು ಅಂದಿನ ದಿವಾನರಾಗಿದ್ದ ಸರ್ ಮಿರ್ಜಾ ಇಸ್ಮಾಯಿಲ್ ಅವರ ನೇತೃತ್ವದಲ್ಲಿ ಅತ್ಯಂತ ವಿಜೃಂಭಣೆಯಿಂದ ನಡೆಯಿತು. ಈ ಸಮಾರಂಭಕ್ಕಾಗಿ ಬಿ. ಪುಟ್ಟಸ್ವಾಮಯ್ಯನವರಿಂದ 'ಕುರುಕ್ಷೇತ್ರ' ಎಂಬ ಪೌರಾಣಿಕ ನಾಟಕವನ್ನು ಬರೆಯಿಸಿ ಸುಮಾರು ಮೂವತ್ತು ಸಾವಿರ ರೂಪಾಯಿಗಳ ವೆಚ್ಚದಲ್ಲಿ ರಂಗಸಜ್ಜಿಕೆ, ವೇಷಭೂಷಣಗಳನ್ನು ಬಳಸಿಕೊಂಡು ಪ್ರದರ್ಶಿಸಲಾಯಿತು".[14]

ಈ ಮಂಡಳಿಯು 'ಸದಾರಮೆ', 'ಶ್ರೀಕೃಷ್ಣಲೀಲಾ', 'ಮಾರ್ಕಂಡೇಯ', 'ಉಷಾ ಸ್ವಯಂವರ' 'ದಶಾವತಾರ' ಮೊದಲಾದ ಪೌರಾಣಿಕ ನಾಟಕಗಳು, ಕರ್ನಾಟಕ ಸಾಮ್ರಾಜ್ಯ', 'ಸ್ವಾಮಿನಿಷ್ಠೆ', 'ಮಹಾತ್ಮ ಕಬೀರ್', 'ಅಕ್ಕಮಹಾದೇವಿ' ಮೊದಲಾದ ಐತಿಹಾಸಿಕ ನಾಟಕಗಳು ಪ್ರಸಿದ್ಧಿಯಾದವು. ಸುಮಾರು ಇಪ್ಪತ್ತೈದು ವರ್ಷಗಳ ಕಾಲ ಅತ್ಯಂತ ಯಶಸ್ವಿಯಾಗಿ ತಮ್ಮ ಮುಂದಾಳತ್ವದಲ್ಲಿ ಮಂಡಳಿಯನ್ನು ನಡೆಸಿದ ವೀರಣ್ಣನವರು 1940ರಲ್ಲಿ ಕನ್ನಡ ಚಲನಚಿತ್ರರಂಗಕ್ಕೆ ಪ್ರವೇಶ ಮಾಡಿದರು.

ಗಂಗಾಧರರಾವ್, ಎಂ.ವಿ. ಸುಬ್ಬಯ್ಯನಾಯ್ಡು ರಾಜಮ್ಮ, ಬಿ. ಜಯಮ್ಮ, ಬಾಲಕೃಷ್ಣ, ನರಸಿಂಹರಾಜು, ಡಾ॥ ರಾಜ್‌ಕುಮಾರ್ (ಮುತ್ತುರಾಜ್), ಜಿ.ವಿ. ಅಯ್ಯರ್, ಬಿ.ವಿ. ಕಾರಂತ, ಹಿರಣ್ಣಯ್ಯ ಮೊದಲಾದ ನಟರನ್ನು ಗುಬ್ಬಿ ಕಂಪನಿಯು ಚಲನಚಿತ್ರರಂಗಕ್ಕೆ ಕೊಟ್ಟಿತು. ಹೀಗೆ ಕನ್ನಡ ರಂಗಭೂಮಿಯ ಇತಿಹಾಸದಲ್ಲಿ ಈ ಮಂಡಳಿಯು ಶಾಶ್ವತವಾದ ಹೆಸರನ್ನು ಗಳಿಸಿಕೊಂಡಿದೆ.

**(ಉ) ಶ್ರೀಕಂಠೇಶ್ವರ ಕರ್ನಾಟಕ ನಾಟಕ ಮಂಡಳಿ**

ಮೈಸೂರಿನ ಅರಮನೆಯ ನಾಟಕ ಮಂಡಳಿಯು ವೃತ್ತಿರಂಗಭೂಮಿಯಲ್ಲಿ ಹೊಸ ಅಧ್ಯಾಯವನ್ನೇ ಆರಂಭಿಸಿತ್ತು. ಇದರ ಪ್ರಭಾವದಿಂದಾಗಿ ರಂಗಾಚಾರ್ಯರು, ಎ.ವಿ. ವರದಾಚಾರ್ಯರು ಹೊಸನಾಟಕ ಮಂಡಳಿಗಳನ್ನು ಹುಟ್ಟುಹಾಕಿ ಸಾರ್ವಜನಿಕರ ಪ್ರೋತ್ಸಾಹದಿಂದ ಒಳ್ಳೆಯ ಹೆಸರುಗಳಿಸಿದ್ದವು. ನಾಯಕ ನಟರಾದ ನರಸಿಂಹಯ್ಯನವರನ್ನು ಅರಮನೆಯ ಮಂಡಳಿಗೆ ಸೇರಿಸುವ ಪ್ರಯತ್ನಗಳು ವಿಫಲವಾದವು. ಇದೇ ಸಂದರ್ಭದಲ್ಲಿ ಎಸ್.ಎಸ್. ಸೆಟ್ಲೂರ್, ಟಿ. ಗೋಪಾಲ, ಅಯ್ಯಂಗಾರ್ ಮುಂತಾದ ವಿದ್ಯಾವಂತರು ಬೆಂಗಳೂರಿನಲ್ಲಿ ನಾಟಕ ಸಂಘವನ್ನು ಹುಟ್ಟುಹಾಕಿ ಸುಲ್ತಾನ್ ಪೇಟೆಯ ಮುಸ್ಲಿಂ ಹಾಲಿನ ಪಕ್ಕದ ನಿವೇಶನದಲ್ಲಿ ರಂಗಸಜ್ಜಿಕೆ ನಿರ್ಮಾಣಮಾಡಿ ನಾಟಕಗಳನ್ನು ಅಭಿನಯಿಸಿದರು.

ಬೆಂಗಳೂರಿನ ನಾಗರಿಕರು ನಾಟಕದ ಬಗ್ಗೆ ಆಸಕ್ತಿ ಬೆಳಸಿಕೊಂಡಿದ್ದರು. ಇದರಿಂದ ಪ್ರಭಾವಿತರಾದ ಎಂ.ಎಲ್. ಶ್ರೀಕಂಠೇಶಗೌಡರು 1895ರಲ್ಲಿ ತಮ್ಮ ಸ್ನೇಹಿತರಾದ ಪೂರ್ಣರಾಘವೇಂದ್ರರಾಯರ ಹಾಗೂ ಎಲ್. ಜಯರಾಯರ ನೆರವಿನಿಂದ 'ಶ್ರೀಕಂಠೇಶ್ವರ

ಕರ್ನಾಟಕ ನಾಟಕ ಸಭೆ'ಯನ್ನು ಸ್ಥಾಪಿಸಿದರು. "ಈ ಮಂಡಳಿಯವರು ಪ್ರದರ್ಶಿಸುತ್ತಿದ್ದ ನಾಟಕಗಳೆಂದರೆ 'ಸೀತಾಸ್ವಯಂವರ', 'ಘೋಷಯಾತ್ರೆ', 'ಪ್ರಮೀಳಾರ್ಜುನೀಯ' ಮತ್ತು 'ಹಿಂಸಾಪರ'. ಈ ಮಂಡಳಿಯಲ್ಲಿ ಸುಧರ್ಮಪಂಡಿತರು, ಅಣ್ಣೂಲಾಲ್, ನಾರಾಯಣಶಾಸ್ತ್ರಿ, ಕೃಷ್ಣಾಜಟ್ಟಪ್ಪ, ಮಹಾಲಿಂಗಪ್ಪ, ಭೀಮಸೇನರಾವ್ ಮೊದಲಾದವರು ಹೆಸರು ಗಳಿಸಿದ್ದರು. ಇದು 1907ರ ವರೆಗೆ ತುಂಬ ಯಶಸ್ವಿಯಾಗಿ ಕೆಲಸಮಾಡಿತು"[15].

ವೃತ್ತಿರಂಗಭೂಮಿಯ ಆರಂಭದ ಕಾಲದಲ್ಲಿ ಮೈಸೂರಿನ ಉತ್ತರ ಕರ್ನಾಟಕದಲ್ಲಿ 'ಮರಾಠಿ ನಾಟಕ ಮಂಡಳಿಗಳ ಪ್ರಭಾವ ಹೆಚ್ಚಾಗಿತ್ತು. ಇದನ್ನು ಗಮನಿಸಿ ರಾಜಾಶ್ರಯ ಪಡೆದುಕೊಂಡ ನಾಟಕ ಮಂಡಳಿ ಮೈಸೂರಿನಲ್ಲಿ ಸ್ಥಾಪನೆಯಾಯಿತು. ಹಲವು ನಾಟಕ ಸಂಘಗಳ ಪೈಪೋಟಿಯನ್ನು ಇದು ಎದುರಿಸಬೇಕಾಯಿತು. ಎರಡನೆಯ ಕಾಲಘಟ್ಟದಲ್ಲಿ ವರದಾಚಾರ್, ವೀರಣ್ಣ ಮೊದಲಾದವರ ಗರಡಿಯಲ್ಲಿ ನಾಟಕ ಮಂಡಳಿಗಳು ಸ್ಥಾಪನೆಯಾಗಿ ಹೆಚ್ಚು ಹೆಸರು ಮಾಡಿದವು. ದಕ್ಷಿಣ ಭಾರತದ ಪ್ರಮುಖ ಪಟ್ಟಣಗಳಲ್ಲಿ ನಾಟಕಗಳನ್ನು ಪ್ರದರ್ಶಿಸುತ್ತಾ, ವೃತ್ತಿರಂಗಭೂಮಿಗೆ ಜೀವಂತಿಕೆ ತುಂಬಿದರು.

ಮೂರನೆಯ ಕಾಲಘಟ್ಟದಲ್ಲಿ ಸಿನಿಮಾ ಪ್ರಭಾವದಿಂದಾಗಿ ಪ್ರೇಕ್ಷಕರ ಕೊರತೆಯನ್ನು ಎದುರಿಸಬೇಕಾಯಿತು. ಕಲಾವಿದರು ಕೂಡ ಚಲನಚಿತ್ರ ರಂಗದ ಕಡೆಗೆ ಆಕರ್ಷಿತರಾದರು. ಸ್ವಾತಂತ್ರ್ಯೋತ್ತರದ ಕಾಲಘಟ್ಟದಲ್ಲಿ ವೃತ್ತಿ ನಾಟಕಗಳ ಯಜಮಾನಿಕೆ ಯುವಕರ ಕೈಸೇರಿತು. ಸರ್ಕಾರವು ಅಕಾಡೆಮಿಗಳ ಮೂಲಕ ರಂಗಚಟುವಟಿಕೆಗಳಿಗೆ ಪ್ರೋತ್ಸಾಹ ನೀಡಿತು. ಬಿಸಿರಕ್ತದ ಯುವಕರು ಯಾವುದೇ ರೀತಿಯ ಸ್ಪರ್ಧೆಗಳನ್ನು ಎದುರಿಸಿ ರಂಗ ಪ್ರಯೋಗಗಳನ್ನು ನಡೆಸಿಕೊಂಡು ಬರುತ್ತಿದ್ದಾರೆ.

---

# ಅಧ್ಯಾಯ – 3

# ಕನ್ನಡದಲ್ಲಿ ಷೇಕ್ಸ್‌ಪಿಯರ್ ನಾಟಕಗಳು

ಇಪ್ಪತ್ತನೆಯ ಶತಮಾನದ ಆದಿಯಲ್ಲಿ ಭಾಷಾಂತರದ ಮೂಲಕ ಕನ್ನಡ ಕಟ್ಟುವ ಕೆಲಸ ಬಿರುಸಾಗಿ ನಡೆಯಿತು. ಇಂಗ್ಲಿಷ್ ಮತ್ತು ಸಂಸ್ಕೃತ ಸಾಹಿತ್ಯದಿಂದ ಕನ್ನಡಕ್ಕೆ ಭಾಷಾಂತರ, ರೂಪಾಂತರ, ಭಾವಾಂತರ ಮಾಡುವ ಸಂದರ್ಭದಲ್ಲಿ ಇಂಗ್ಲಿಷ್ ನಾಟಕಕಾರ ಷೇಕ್ಸ್‌ಪಿಯರ್‌ನ ಕೃತಿಗಳನ್ನು ಕನ್ನಡಕ್ಕೆ ತರುವ ಕೆಲಸ ನಡೆಯಿತು. "ಇಂಗ್ಲಿಷ್ ಸಾಹಿತ್ಯವನ್ನು ಕನ್ನಡದಲ್ಲಿ ತರುವುದು ಸುಲಭದ ಕೆಲಸವೇನಲ್ಲ. ಕಾರಣ ಇಂಗ್ಲಿಷ್ ಸಾಹಿತ್ಯದಲ್ಲಿನ ಜೀವನ ವಿಧಾನ ಮತ್ತು ಸಂಪ್ರದಾಯಗಳು ನಮಗೆ ಅಪರಿಚಿತವಾದವುಗಳಾಗಿದ್ದು, ಪದಶಃ ಅನುವಾದ ಮಾಡಿದರೆ ವ್ಯತಿರಿಕ್ತವಾಗಿರುತ್ತದೆ. ಆದರೆ ಈ ಕಾರಣದಿಂದಾಗಿ ಷೇಕ್ಸ್‌ಪಿಯರ್ ನಾಟಕಗಳಿಗೂ ಭಾರತೀಯ ನಾಟಕಗಳಿಗೂ ಸಾಮ್ಯ ಕಂಡುಬರುವುದರಿಂದ ನಮ್ಮ ರಂಗಭೂಮಿಗೆ ಸುಲಭವಾಗಿ ಅಳವಡುತ್ತಿವೆ. ಈ ಕಾರಣದಿಂದಾಗಿ ಷೇಕ್ಸ್‌ಪಿಯರ್‌ನ ಬಹುತೇಕ ಎಲ್ಲಾ ನಾಟಕಗಳು ಭಾರತೀಯ ಭಾಷೆಗಳಿಗೆ ಅನುವಾದಗೊಂಡವು. "ಷೇಕ್ಸ್‌ಪಿಯರ್‌ನ ನಾಟಕಗಳಲ್ಲಿ ಕಂಡುಬರುವ ವಸ್ತು ಸಂವಿಧಾನದ ಅಂಗಗಳಿಗೂ, ಭಾರತೀಯ ನಾಟ್ಯಶಾಸ್ತ್ರದ ಸಂಧ್ಯಂಗಗಳಿಗೂ ನಿಕಟವಾದ ಹೋಲಿಕೆಯಿದೆ"[1] ಎಂಬುದನ್ನು ಮಿಲ್ಸನ್ ಎಂಬ ಆಂಗ್ಲ ವಿದ್ವಾಂಸ "ಸೆಲೆಕ್ಟ್ ಸ್ಪೆಸಿಮೆನ್ ಆಫ್ ದಿ ಥಿಯೇಟರ್ ಆಫ್ ದಿ ಹಿಂಡೂಸ್" ಎಂಬ ಗ್ರಂಥದಲ್ಲಿ ತಿಳಿಸಿದ್ದಾನೆ."

ಷೇಕ್ಸ್‌ಪಿಯರ್‌ನು ಹರ್ಷ, ರುದ್ರ ಮತ್ತು ಚಾರಿತ್ರಿಕ ವಸ್ತುಗಳನ್ನು ಒಳಗೊಂಡ ನಾಟಕಗಳನ್ನು ರಚಿಸಿದ. ಷೇಕ್ಸ್‌ಪಿಯರ್ ಬದುಕಿದ್ದಾಗ ಅವನ ಹದಿನೆಂಟು ನಾಟಕಗಳು ಪ್ರಕಟವಾದವು. ಉಳಿದವುಗಳನ್ನು ಅವನ ಮರಣದ ನಂತರ ಅವನ ಸ್ನೇಹಿತರು, ಸಹನಟರು ಸಂಪಾದಿಸಿ ಪ್ರಕಟಿಸಿದರು.

ಷೇಕ್ಸ್‌ಪಿಯರ್‌ನ ಹಲವು ನಾಟಕಗಳು ಕನ್ನಡಕ್ಕೆ ಅನುವಾದದ ಮೂಲಕ ಬಂದವು. ಅನುವಾದ ಎಂಬುದು ಅಷ್ಟು ಸುಲಭದ ಮಾತೇನು ಅಲ್ಲ. ಅನ್ಯ ಪ್ರದೇಶದ ಅನ್ಯಭಾಷೆ, ಸಂಸ್ಕೃತಿ, ಸಂಪ್ರದಾಯಗಳನ್ನು, ಜೀವನ ವಿಧಾನವನ್ನು, ಅನುವಾದಿಸುವಾಗ ನಮ್ಮ ಪ್ರದೇಶದ ನಮ್ಮ ಭಾಷೆಯ, ನಮ್ಮ ಸಂಸ್ಕೃತಿ, ಸಂಪ್ರದಾಯ, ಜೀವನ ವಿಧಾನವನ್ನಾಗಿ ಮೂಲ ಕೃತಿಗೆ ಚ್ಯುತಿ ಬರದಂತೆ ಕಾಯ್ದುಕೊಳ್ಳುವುದು. ಉತ್ತಮ ಅನುವಾದವಾಗುತ್ತದೆ. ಷೇಕ್ಸ್‌ಪಿಯರ್‌ನ ಹೆಚ್ಚು ನಾಟಕಗಳು ರೂಪಾಂತರದ ಮೂಲಕವೇ ಕನ್ನಡಕ್ಕೆ ಬಂದಿವೆ.

"ಇಂಗ್ಲಿಷ್ ಭಾಷೆಯ ನಾಟಕಗಳನ್ನು ಎಲ್ಲರೂ ಕನ್ನಡಕ್ಕೆ ರೂಪಾಂತರಿಸಲು ಕಾರಣ ಸ್ಪಷ್ಟವಿದೆ. ಪ್ರೇಕ್ಷಕ–ಅನುವಾದಕ–ನಟರೆಲ್ಲರೂ ಈ ಭಾಷೆಯ ಹಿನ್ನೆಲೆಯನ್ನು ಸರಿಯಾಗಿ ತಿಳಿಯದೇ ಇದ್ದವರು ಎಂಬುದನ್ನು ನೆನಪಿನಲ್ಲಿಟ್ಟುಕೊಂಡು ಕನ್ನಡ ರೂಪಾಂತರಗಳನ್ನು ಪರಿಶೀಲಿಸಬೇಕು".[2] "ಹಳಗನ್ನಡದ ಸಂದರ್ಭದಲ್ಲಿ ಸಂಸ್ಕೃತ ಪರಂಪರೆ ಹೇಗೆ ಕನ್ನಡ ಸಾಹಿತ್ಯಕ್ಕೆ ಪ್ರೇರಣೆ ನೀಡಿದೆಯೋ ಅದೇ ರೀತಿಯಲ್ಲಿ ಆಧುನಿಕ ಸಂದರ್ಭದಲ್ಲಿ ಇಂಗ್ಲಿಷ್ ಸಾಹಿತ್ಯದ ಪ್ರೇರಣೆ ಇದೆ".[3] "ಷೇಕ್ಸ್‌ಪಿಯರ್ ಒಬ್ಬ ಗಹನ ಮತ್ತು ಮಹತ್ವದ ಸಾಮಾಜಿಕ, ರಾಜಕೀಯ, ನಾಟಕಕಾರ, ಅವನ ಒಳನೋಟಗಳು ಮತ್ತು ಜೀವನದೃಷ್ಟಿ ಅತ್ಯಂತ ವಿಶಾಲವಾದದ್ದು. ಹೀಗಾಗಿ ಆತನಿಗೆ ಕನಿಷ್ಠ ನ್ಯಾಯ ದೊರಕಿಸಕೊಡಬೇಕೆಂದರೂ ಭಾಷಾಂತರಕಾರರಿಗೆ ಆತನ ಒಳನೋಟಗಳ ಪ್ರಜ್ಞೆಗಳ ಜೊತೆ ತನ್ನ ಸುತ್ತಲ ಜಗತ್ತಿನ ಬಗ್ಗೆ ಕಾಳಜಿಗಳು ಇರಬೇಕಾದುದು ಅತ್ಯವಶ್ಯವಾಗುತ್ತದೆ".[4]

19ನೇ ಶತಮಾನದಲ್ಲಿ ನಾಟಕ ಸೃಷ್ಟಿ ಆರಂಭವಾಯಿತೆನ್ನಬಹುದು. ಅದು ಸಹ ಅನುವಾದಗಳ ಮೂಲಕ ವೃತ್ತಿ ರಂಗಭೂಮಿಯಲ್ಲಿ ಪ್ರದರ್ಶನಕ್ಕಾಗಿ ಬೇಕಾಗಿದ್ದ ನಾಟಕಗಳಿಗಾಗಿ. ಈ ಹೊತ್ತಿನಲ್ಲಿ ಸಾಮಾನ್ಯಜನರಿಗೆ ತಲುಪಿಸಲು ಸಾಧ್ಯವಿದ್ದ ಮತ್ತು ಭಾರತೀಯ ಪರಂಪರೆಯಲ್ಲಿಯೇ ಇದ್ದ ಕೆಲವು ಕಥೆಗಳಿಗೆ ಷೇಕ್ಸ್‌ಪಿಯರನ ನಾಟಕಗಳ ಕಥೆಗಳನ್ನು ಅಳವಡಿಸಿ, ರೂಪಾಂತರಿಸಿ ಹೇಳುವ ಪರಿಪಾಠ ಶುರುವಾಯಿತು. ಮೊದಲಿಗೆ ಡೆಪ್ಯುಟಿ ಚನ್ನಬಸಪ್ಪ, ಬಸವಪ್ಪಶಾಸ್ತ್ರಿ, ಚುರಮುರಿ, ಆನಂದರಾವ್, ಎಂ.ಎಲ್. ಶ್ರೀಕಂಠೇಶಗೌಡ ಪ್ರಮುಖರಾದರೆ, ಕನ್ನಡ ನವೋದಯ ಕಾಲದಲ್ಲಿ ಡಿ.ವಿ.ಜಿ. ಕೆರೂರು ವಾಸುದೇವಾಚಾರ್ಯ, ಕುವೆಂಪು ಮುಖ್ಯರಾಗುತ್ತಾರೆ. 50–60ರ ದಶಕದಲ್ಲಿ ಮಾಸ್ತಿವೆಂಕಟೇಶ ಅಯ್ಯಂಗಾರ್, ಎ.ಎನ್. ಮೂರ್ತಿರಾವ್, ವೈ.ಎಂ. ಷಣ್ಮುಖಯ್ಯ ಮುಂತಾದವರು ಭಾಷಾಂತರಿಸಿದರೆ 70ರ ದಶಕದ ನಂತರ ನಿಸಾರ್ ಅಹಮದ್, ಕೆ.ಎಸ್, ಭಗವಾನ್, ಪಿ.ವಿ. ನಾರಾಯಣ, ರಾಮಚಂದ್ರದೇವ, ಹೆಚ್.ಎಸ್. ಶಿವಪ್ರಕಾಶ, ಶಶಿಧರ, ಮುಂತಾದವರು ಆಧುನಿಕ ಕನ್ನಡ ರಂಗಭೂಮಿಗೆ ಅನುಗುಣವಾದ ಕನ್ನಡ ಭಾಷೆಯನ್ನು ಸಮರ್ಥವಾಗಿ ಬಳಸಿದರು ಮತ್ತು ಷೇಕ್ಸ್‌ಪಿಯರನ ನಾಟಕಗಳನ್ನು ಕನ್ನಡೀಕರಣ ಮಾಡುವುದರ ಮೂಲಕ ಕನ್ನಡ ನಾಟಕ ಕ್ಷೇತ್ರ ಹಾಗೂ ರಂಗಭೂಮಿ ಕ್ಷೇತ್ರದಲ್ಲಿ ಜೀವಂತಿಕೆಯನ್ನು ತಂದುಕೊಟ್ಟ ಶ್ರೇಯಸ್ಸಿಗೂ ಪಾತ್ರರಾದರು.

"ನವೋದಯ ಪೂರ್ವಕಾಲದಲ್ಲಿ ಷೇಕ್ಸ್‌ಪಿಯರ್‌ನನ್ನು ಕನ್ನಡ ನಾಟಕಕಾರರು ನೇರವಾಗಿ ಸ್ವೀಕರಿಸಲಿಲ್ಲ. ಭಾರತೀಯ ಸಂವೇದನೆಗಳನ್ನು ಮಂಡಿಸಲು ಮತ್ತು ಕನ್ನಡ ರಂಗಭೂಮಿಯ ಅಗತ್ಯವನ್ನು ಪೂರೈಸಲು ಷೇಕ್ಸ್‌ಪಿಯರನ ನಾಟಕಗಳ ವಸ್ತು ಸಂವಿಧಾನಗಳನ್ನು ಅವರು ಬಳಸಿಕೊಂಡರು".[5]

60ರ ದಶಕದ ಅನುವಾದಕರಲ್ಲಿ ನಿಸಾರ್‌ಅಹಮದ್, ರಾಮಚಂದ್ರದೇವ ಮತ್ತು ಎಚ್.ಎಸ್. ಶಿವಪ್ರಕಾಶರವರು ಸಮರ್ಥರಾಗಿದ್ದಾರೆ. "ಷೇಕ್ಸ್‌ಪಿಯರನ ಮೂಲವನ್ನು ಕನ್ನಡಿಸುವಾಗ ಅತಿಯಾಗಿ ರಾಜಿಮಾಡಿಕೊಳ್ಳದೆ ಸಾಕಷ್ಟು ಮಟ್ಟಿಗೆ ಕಾವ್ಯಮಯತೆಯನ್ನು ಉಳಿಸಿಕೊಂಡಿದ್ದಾರೆ. ಹೀಗಾಗಿ ಜನರ ಭಾಷೆಯನ್ನು ಬಳಸುತ್ತಲೇ ಜನರು ಭಾಷೆಯ ವೈವಿಧ್ಯಮಯತೆಗೆ, ಕಾವ್ಯಕ್ಕೆ, ಅಂತರ್ಗತ ಧ್ವನಿಗಳಿಗೆ ಸ್ಪಂದಿಸುವುದಕ್ಕೆ ಸಾಧ್ಯವಾಗುವ ಹಾಗೆ ಭಾಷಾಂತರ ಮಾಡಿದ್ದಾರೆ".[6]

"ಷೇಕ್ಸ್‌ಪಿಯರ್ ನಾಟಕಗಳನ್ನು ಕನ್ನಡಕ್ಕೆ ತಂದಿದ್ದು ಕನ್ನಡ ನಾಟಕ ಪರಂಪರೆಯಲ್ಲಿ ಹೊಸದೊಂದು ಪರಿಣಾಮವನ್ನು ಉಂಟುಮಾಡಿತು. ಅದೆಂದರೆ ಪಾಶ್ಚಾತ್ಯರಲ್ಲಿದ್ದ ದುರಂತ ವಸ್ತುಗಳನ್ನು ನಮ್ಮತನಕ್ಕೆ ಹೊಂದಿಸಿಕೊಂಡು, ನಮ್ಮ ವಸ್ತುವಿನಲ್ಲೆ ನಿರ್ವಹಿಸತಕ್ಕ ಬೆಳವಣಿಗೆ. ಇಂತಹ ಬೆಳವಣಿಗೆಗೆ ಬಿ.ಎಂ.ಶ್ರೀಯವರು ಅಶ್ವತ್ಥಾಮನ್ ನಾಟಕದಿಂದ ಮೂಲ ಪ್ರೇರಕರು ಆದರು, ಷೇಕ್ಸ್‌ಪಿಯರ್ ನಾಟಕಗಳ ಅನುವಾದದ ಅಲೆಯ ಹೊತ್ತಿನಲ್ಲಿ ಹೆಚ್ಚು ಬೆಳವಣಿಗೆಗೆ ಬಂದಿತೆಂದು ಹೇಳಬಹುದು".[7]

ಷೇಕ್ಸ್‌ಪಿಯರನ ಒಂದೇ ನಾಟಕ ವಿವಿಧ ಕಾಲಘಟ್ಟಗಳಲ್ಲಿ ಸಮಕಾಲೀನ ಸ್ಪಂದನೆಗಳಿಗನುಗುಣವಾಗಿ ಮತ್ತೆ ಮತ್ತೆ ಕನ್ನಡಕ್ಕೆ ರೂಪಾಂತರ ಭಾಷಾಂತರಗೊಳ್ಳುತ್ತಾ ಬಂದಿದೆ. ರೂಪಾಂತರಗಳು ನವೋದಯ ಪೂರ್ವದಲ್ಲಿ ಬಂದ ರಂಗಭೂಮಿಯ ಮೇಲೆ ಪ್ರಯೋಗಿಸುವ ಹಂಬಲದಿಂದಲೇ ರಚಿತವಾದುವುಗಳು. ಭಾಷೆ ತಿಳಿದಿರುವ ಹಾಗೂ ರಂಗದ ಚಟುವಟಿಕೆಗಳಲ್ಲಿ ಆಸಕ್ತರಾಗಿದ್ದ ಹಲವಾರು ಷೇಕ್ಸ್‌ಪಿಯರ್‌ನ ನಾಟಕಗಳನ್ನು ಕನ್ನಡಕ್ಕೆ ತಂದರು. ಕೆಲವರು ಭಾಷೆ ಬಲ್ಲವರ ಸಹಾಯ ಪಡೆದುಕೊಂಡು ಕನ್ನಡಕ್ಕೆ ತಂದರು.

**(ಅ) ಒಥೆಲೊ**

ಒಥೆಲೊ ಷೇಕ್ಸ್‌ಪಿಯರ್‌ನ ಮಹಾ ರುದ್ರನಾಟಕ ಬಸವಪ್ಪಶಾಸ್ತ್ರಿಗಳು 'ಶೂರಸೇನಚರಿತೆ' ಎಂದು 1895ರಲ್ಲಿ ಅನುವಾದಿಸಿದ್ದಾರೆ. ಷಣ್ಮುಖಯ್ಯ, 1885ರಲ್ಲಿ ಒಥೆಲೊ ಹೆಸರಿನಿಂದ ಅನುವಾದಿಸಿದ್ದರೆ, ಕೆ.ಎಸ್. ಭಗವಾನ್ 1997ರಲ್ಲಿ ಅದೇ ಹೆಸರಿನಿಂದ ಅನುವಾದಿಸಿದ್ದಾರೆ. ನಿಸಾರ್ ಅಹಮದ್‌ರವರು 1975ರಲ್ಲಿ ಒಥೆಲೊ ಹೆಸರಿನಿಂದಲೇ ಅನುವಾದಿಸಿದ್ದಾರೆ. ರಾಘವೇಂದ್ರರಾವ್ ಹೆಸರಿನಿಂದ ಚುರಮುರಿಯವರು ಅನುವಾದಿಸಿದ್ದಾರೆ. "ಹತ್ತೊಂಬತ್ತನೇ ಶತಮಾನದ ವಸಾಹತುಶಾಹಿ ಸಮಾಜದ ಮೇಲೆ ಬರೆದ ಕನ್ನಡದ ಮೊದಲ ನಾಟಕ **ರಾಘವೇಂದ್ರರಾವ್**, ಈ ರೂಪಾಂತರದ ಮೂಲಕ ನಿರ್ಲಕ್ಷ್ಯಕ್ಕೊಳಗಾದ ಷೇಕ್ಸ್‌ಪಿಯರ್ ನಾಟಕದ ಒಂದು ಮುಖದ ಕಡೆಗೆ ಚುರಮುರಿಯವರು ತಮ್ಮ ಗಮನ ಸೆಳೆದಿದ್ದಾರೆ".[8]

"ಬಸವಪ್ಪಶಾಸ್ತ್ರಿಗಳ ಕಾವ್ಯ ರಚನೆಗಳಲ್ಲಿ ಪಾಂಡಿತ್ಯವಿದೆಯಾದರೂ ಕವಿತ್ವವಿಲ್ಲ. ಮೂಲದ ತೇಜಸ್ಸು ಮಸುಕಾಗಿದೆ".[9] "ಷೇಕ್ಸ್‌ಪಿಯರ್‌ನು ಇತಿಹಾಸ ನಾಟಕಗಳಲ್ಲಿನ ರಾಜಕೀಯ ಕುತಂತ್ರ ಆಂದೋಲನಗಳು, ರಣಕಹಳೆ, ರಕ್ತಪಾತ, ಇವನ್ನೆಲ್ಲಾ ಮನಸ್ಸಿನಿಂದ ಹೊರದೂಡಿ, ಸ್ವಲ್ಪಕಾಲ ಹರ್ಷಚಿತ್ತನಾಗಿ ಜೀವನದ ಸವಿಯನ್ನು ಮೆಲುಕು ಹಾಕುತ್ತ ಬರೆದಂತಿದೆ ಈ ನಾಟಕ".[10]

**(ಆ) ಆ್ಯಸ್ ಯು ಲೈಕ್ ಇಟ್**

ಆ್ಯಸ್ ಯು ಲೈಕ್ ಇಟ್ ನಾಟಕವನ್ನು ಶಾಮರಾಯ ವೆಂಕಟಾದ್ರಿಯವರು 'ಕಲಾವತಿ ಪರಿಣಯ'ವೆಂದು ಭಾರತೀಸುತರವರು 'ದೊರೆಮಗಳು' (ನೀಳ್ಗತೆ) ಎಂದು 1959ರಲ್ಲಿ ಕೆ.ಎಸ್.ನಿಸಾರ್‌ಅಹಮದ್‌ರವರು 'ನಿಮ್ಮಿಷ್ಟ' ಎಂದು 1996ರಲ್ಲಿ ಅನುವಾದಿಸಿದ್ದಾರೆ. ಮಾಸ್ತಿಯವರು ಆರ್ಡನ್ ಕಾನನದ ಪ್ರಣಯ ಪ್ರಸಂಗಗಳು ಎಂಬ ಹೆಸರಿನಲ್ಲಿ 1962ರಲ್ಲಿ ಭಾಗಶಃ ಭಾಷಾಂತರಿಸಿದ್ದಾರೆ.

**(ಇ) ದಿ ಕಾಮಿಡಿ ಆಫ್ ಎರರ್ಸ್**

ದಿ ಕಾಮಿಡಿ ಆಫ್ ಎರರ್ಸ್ ನಾಟಕವನ್ನು ಬಿ. ವೆಂಕಟಾಚಾರ್ಯರವರು 1876ರಲ್ಲಿ 'ಭ್ರಾಂತಿವಿಲಾಸ' ಎಂದು ಅನುವಾದಿಸಿದ್ದರೆ, ಪರ್ವತವಾಣಿಯವರು "ವಿಪರ್ಯಾಸ" ಎಂದು 1966ರಲ್ಲಿ ಅನುವಾದಿಸಿದ್ದಾರೆ. ಈ ನಾಟಕ ಷೇಕ್ಸ್‌ಪಿಯರ್‌ನ ಚಿಕ್ಕ ನಾಟಕಗಳಲ್ಲಿ ಒಂದು. "ಧಾರವಾಡದ ಡೆಪ್ಯುಟಿ ಚನ್ನಬಸಪ್ಪನವರು ನಗದವರನ್ನು ನಗಿಸುವ ಕಥೆ ಎಂಬ ಹೆಸರಿನಲ್ಲಿ ರೂಪಾಂತರಿಸಿ 1871ರಲ್ಲಿ ಧಾರವಾಡದಲ್ಲಿ ಮುದ್ರಿಸಿದ್ದರೆಂದು ಕಿಟ್ಟೆಲ್‌ರವರು ಹೇಳಿದ್ದಾರೆ".[11]

**(ಈ) ಕಿಂಗ್‌ಲಿಯರ್**

ಕಿಂಗ್‌ಲಿಯರ್ ನಾಟಕವನ್ನು ಮಾಸ್ತಿ ವೆಂಕಟೇಶ ಅಯ್ಯಂಗಾರ್‌ರವರು 'ಲಿಯರ್‌ಮಹಾರಾಜ' ಎಂದು 1956ರಲ್ಲಿ ಭಾಷಾಂತರಿಸಿದ್ದಾರೆ. ಎಂ.ಎಸ್. ಪುಟ್ಟಣ್ಣನವರು 1899ರಲ್ಲಿ 'ಹೇಮಚಂದ್ರ ರಾಜವಿಲಾಸ' ಎಂದು, 1998ರಲ್ಲಿ ಹೆಚ್.ಎಸ್. ಶಿವಪ್ರಕಾಶರವರು 'ಕಿಂಗ್‌ಲಿಯರ್' ಎಂದು ಅನುವಾದಿಸಿದ್ದಾರೆ. "ಷೇಕ್ಸ್‌ಪಿಯರ್‌ನ ದುರಂತ ನಾಟಕಗಳಲ್ಲಿ ಕಥಾನಾಯಕರಿಗಿಂತ ಖಳನಾಯಕರು ಹೆಚ್ಚು ಕ್ರಿಯಾಶೀಲರಾಗಿ ಕಂಡುಬರುತ್ತಾರೆ. ಷೇಕ್ಸ್‌ಪಿಯರ್‌ನ ಇತರ ಕೆಲವು ನಾಟಕಗಳಂತೆ ಈ ನಾಟಕವೂ ಸಿನೆಮಾಆಗಿ ಸಹ ಪ್ರಸಿದ್ಧವಾಗಿದೆ".[12] ಷೇಕ್ಸ್‌ಪಿಯರನ ಮಹಾರುದ್ರನಾಟಕಗಳಲ್ಲಿ ಈ ನಾಟಕ ಕೂಡ ಪ್ರಸಿದ್ಧಿ ಪಡೆದಿದೆ.

**(ಉ) ಜೂಲಿಯಸ್ ಸೀಜರ್**

ಜೂಲಿಯಸ್ ಸೀಜರ್ ನಾಟಕವನ್ನು ಜೂಲಿಯಸ್ ಸೀಜರ್ ಎಂಬ ಹೆಸರಿನಲ್ಲೇ ಎಂ.ವಿ. ಇನಾಂದಾರ್, ತೇಜಸ್ವಿನಿ, ನಿರಂಜನ್, ತಿರುಮಲೆ ತಾತಾಚಾರ್ಯಶರ್ಮ (1931), ವೈ.ಎಂ. ಷಣ್ಮುಖಯ್ಯ, ಕೆ.ಎಸ್. ಭಗವಾನ್ (1975), ತೇಜಸ್ವಿನಿ ನಿರಂಜನ್ (1977), ಐ.ಮಾ ಮುತ್ತಣ್ಣ (1987) ಮೊದಲಾದವರು ಅನುವಾದಿಸಿದ್ದಾರೆ. "ಈ ನಾಟಕದಲ್ಲಿ ವಸ್ತು ಐತಿಹಾಸಿಕವಾದರೂ ಅದು ಕಾಲದೇಶಗಳೆರಡರ ದೃಷ್ಟಿಯಿಂದ ದೂರವಾದದ್ದು, ಆದ್ದರಿಂದ ಇಲ್ಲಿ ಅವನು ಯಾವುದೊಂದು ರಾಜಕೀಯ ದೃಷ್ಟಿಗೂ ಕಟ್ಟುಬೀಳದೆ ಸ್ವತಂತ್ರವಾಗಿ ಪ್ರತಿಭೆಯನ್ನು ಹರಿಯಬಿಡುವುದು ಸಾಧ್ಯವಾಯಿತು. ಈ ನಾಟಕದ ಕಥಾವಸ್ತು ನಾರ್ತನಿಂದ ಅನುವಾದಿತವಾದ ಪ್ಲುಟಾರ್ಕನ 'ಜೀವನ ಚರಿತ್ರೆಗಳು' ಎಂಬ ಪುಸ್ತಕದಿಂದ ತೆಗೆದುಕೊಂಡದ್ದು. ಷೇಕ್ಸ್‌ಪಿಯರ್ ಈ ಮೂಲದ ಕಥಾ ಸರಣಿಯನ್ನು ಅನುಸರಿಸುವುದು ಮಾತ್ರವಲ್ಲದೆ ಅನೇಕ ವೇಳೆ ನಾರ್ತನ ಭಾಷೆಯನ್ನೂ ಬಳಸಿಕೊಂಡಿದ್ದಾನೆ"[13] ಹಾಗೂ "ಈ ನಾಟಕದಲ್ಲಿ ಷೇಕ್ಸ್‌ಪಿಯರ್ ಸರ್ವಕಾಲಕ್ಕೂ ಅನ್ವಯವಾಗುವಂತಹ, ಪ್ರಸ್ತುತವಾಗುವಂತಹ ಪ್ರಶ್ನೆಗಳನ್ನು ಎತ್ತಿದ್ದಾನೆ. ಕ್ರಾಂತಿ, ಪಿತೂರಿ, ರಾಜಕಾರಣಿ, ಮುತ್ಸದ್ದಿ, ವ್ಯಕ್ತಿ, ಸಮಾಜ, ಗಂಡ, ಹೆಂಡತಿ ಇಂಥವರಿಗೆ ಸಂಬಂಧಿಸಿದ ಪ್ರಶ್ನೆಗಳನ್ನು ಬಹುನಾಟಕೀಯವಾಗಿ ನಿರೂಪಿಸಿದ್ದಾನೆ".[14]

**(ಊ) ದಿ ಟೆಂಪೆಸ್ಟ್**

ದಿ ಟೆಂಪೆಸ್ಟ್ ನಾಟಕವನ್ನು **'ಚಂಡಮಾರುತ'** ಎಂದು ಮಾಸ್ತಿ ವೆಂಕಟೇಶ ಅಯ್ಯಂಗಾರ್‌ಅವರು 1959ರಲ್ಲೂ, ಎ.ಎನ್. ಮೂರ್ತಿರಾವ್‌ಅವರು 1981ರಲ್ಲೂ ಅನುವಾದಿಸಿದ್ದಾರೆ. **ಬಿರುಗಾಳಿ** ಎಂದು ಕುವೆಂಪುಅವರು 1930ರಲ್ಲಿ ಅನುವಾದಿಸಿದ್ದಾರೆ. "ಅರಮನೆಯ ಗದ್ದುಗೆಯ ಅಧಿಕಾರದ ವ್ಯಾಮೋಹದ ಮೇಲೆ ತನ್ನ ಅಣ್ಣನಿಗೆ ಮಾಡುವ ಮೋಸದ ಲೋಕದ ಮೇಲೆ ಸರಳವಾಗಿ, ಕಾವ್ಯಮಯವಾಗಿ ಕಟ್ಟಿದ ನಾಟಕ ಇದು"[15] ಆಗಿದೆ.

**(ಋ) ದಿ ಮರ್ಚೆಂಟ್ ಆಫ್ ವೆನಿಸ್**

ದಿ ಮರ್ಚೆಂಟ್ ಆಫ್ ವೆನಿಸ್ ನಾಟಕವನ್ನು ಎ. ಆನಂದರಾಯಅವರು **'ಪಾಂಚಾಲಿ ಪರಿಣಯ'** ಎಂದು 1890ರಲ್ಲಿ **'ವೆನಿಸ್ಸಿನ ವ್ಯಾಪಾರಿ'** ಎಂದು ಜಿ. ಗುಂಡಣ್ಣನವರು 1959ರಲ್ಲಿ **'ವೆನಿಸ್‌ನಗರದ ವಣಿಕ'** ಎಂದು ವೆಂಕಟಾಚಾರ್ ಬಿಂಡಿಗನವಿಲೆಯವರು 1906ರಲ್ಲೂ **'ಸುರತನಗರದ ಶ್ರೇಷ್ಠಿ'** ಎಂದು ಕೆರೂರು ವಾಸುದೇವಾ

ಚಾರ್ಯರು 1929ರಲ್ಲೂ **'ವೇಣಿಪುರಿಯ ವರ್ತಕ'** ನೆಂದು ಹನುಮಂತಗೌಡ 1928ರಲ್ಲೂ **'ವೆನಿಸ್ಸಿನವರ್ತಕ'** ಎಂದು ಶಶಿಧರ 1994ರಲ್ಲೂ, 'ವೆನಿಸ್ಸಿನ ವರ್ತಕ'ನೆಂದೂ ಕೆ.ಎಸ್. ಭಗವಾನ್ 1995ರಲ್ಲೂ ಅನುವಾದಿಸಿದ್ದಾರೆ. "ಯು.ಆರ್. ಅನಂತಮೂರ್ತಿ ಅವರು ಹೇಳುವ ಹಾಗೆ ಷೈಲಾಕ್ ನಮಗೆ ನಾಟಕದ ಉದ್ದಕ್ಕೂ ಕಾಣುವುದು ಒಬ್ಬ ಯಹೂದ್ಯನಾಗಿ, ಅವನನ್ನು ಸದೆಬಡಿದು ಸೊಪ್ಪು ಮಾಡಿದ ನಂತರ ಅವನ ಬಗ್ಗೆ ಕರುಣೆಯನ್ನು ಹುಟ್ಟಿಸುವುದು ಅಂಥದ್ದೇನೂ ದೊಡ್ಡ ವಿಷಯವಲ್ಲ".[16] "ರಮ್ಯ ನಾಟಕದಲ್ಲಿ ಪ್ರಣಯಕಥೆ ಮುಖ್ಯವಾಗಬೇಕು. ಇಲ್ಲಿ ಅದು ಗೌಣವಾಗುತ್ತದೆ. ನಾಟಕವನ್ನು ನೋಡಿಯಾದ ಮೇಲೆ ಮೊದಲು ನಮ್ಮ ನೆನಪಿಗೆ ಬರುವುದು ಬಸಾನಿಯೊ–ಪೋರ್ಷಿಯರ ಮದುವೆಯಲ್ಲ. ಆಂಟೋನಿಯೋವಿನ ಮೇಲೆ ಷೈಲಾಕ್ ವಿಫಲನಾದನು. ಆದರೂ ನಾಟಕ ರಂಗಸ್ಥಳದ ಮೇಲೆ ನಿಸ್ಸಂದೇಹವಾಗಿ ವಿಜಯಿಯಾಯಿತು."[17]

**(ಎ) ರೋಮಿಯೊ ಅಂಡ್ ಜೂಲಿಯೆಟ್**

ರೋಮಿಯೊ ಅಂಡ್ ಜೂಲಿಯೆಟ್ ನಾಟಕ ನಮ್ಮವರಿಗೆ ಅತ್ಯಂತ ಪ್ರಿಯವಾಗಿತ್ತೆಂದು ತೋರುತ್ತದೆ. ಆ ನಾಟಕವನ್ನು ಎ.ವಿ. ವರದಾಚಾರ್ಯರವರು **"ರಾಮವರ್ಮ ಲೀಲಾವತಿ"** ಎಂದು ಅನುವಾದಿಸಿದ್ದಾರೆ, ಎ. ಆನಂದರಾವ್‌ರವರು **'ರಾಮವರ್ಮಲೀಲಾವತಿ ಚರಿತ್ರೆ'** ಎಂದು 1889ರಲ್ಲಿ ಅನುವಾದಿಸಿದ್ದಾರೆ.

**'ರಮೇಶ ಲಲಿತಾ'** ಎಂದು ಕೆರೂರು ವಾಸುದೇವಾಚಾರ್ಯರು ಅನುವಾದಿಸಿದ್ದಾರೆ. ಈ ನಾಟಕ ಷೇಕ್ಸ್‌ಪಿಯರ್ ನಾಟಕಗಳನ್ನೆಲ್ಲ ಹೆಚ್ಚು ಜನಪ್ರಿಯತೆ ಪಡೆದ ನಾಟಕವಾಗಿದ್ದು, ರಂಗಸ್ಥಳದಲ್ಲೂ ಅಪಾರ ಕೀರ್ತಿಗಳಿಸಿತು. ಕನ್ನಡದಲ್ಲೂ ರೋಮಿಯೊ ಜೂಲಿಯೆಟ್ ಎಂಬ ಹೆಸರಿನಿಂದಲೇ ಹೆಚ್ಚು ಪ್ರಸಿದ್ಧವಾಗಿದೆ. "ರೋಮಿಯೋ ಅಂಡ್ ಜೂಲಿಯೆಟ್ ನಾಟಕವನ್ನು 'ರಾಮವರ್ಮ ಲೀಲಾವತಿ'ಯಾಗಿ ರೂಪಾಂತರಿಸಿದ ಆನಂದರಾಯರು ನಾಟಕವನ್ನು ಸುಖಾಂತಗೊಳಿಸಿದ್ದಾರೆ. ಭಾರತೀಯ ನಾಟಕಗಳಲ್ಲಿ ದುರಂತ ನಾಟಕಗಳಿಗೆ ಮನ್ನಣೆಯಿಲ್ಲವಾಗಿ ಭಾರತೀಯ ರಂಗಭೂಮಿಯ ಸಂಪ್ರದಾಯವನ್ನು ಅನುಸರಿಸಿ ತಾವು ಹೀಗೆ ಮಾಡಿರುವುದಾಗಿ ಹೇಳಿದ್ದಾರೆ".[18]

**(ಐ) ಹ್ಯಾಮ್ಲೆಟ್**

ಹ್ಯಾಮ್ಲೆಟ್ ನಾಟಕವನ್ನು 'ಸಂತಾಪಕ' ಎಂದು ಅಮೃತಚಾರಿ ಟಿ ಮತ್ತು ನಂಜುಂಡಯ್ಯ 1937ರಲ್ಲಿ ಅನುವಾದಿಸಿದ್ದಾರೆ, **'ಹೇಮಂತ'**ನೆಂದು ಶಿವರಾಮಕಾರಂತ 1930ರಲ್ಲೂ ಎಂ.ಎಸ್. ಪುಟ್ಟಣ್ಣನವರು 1920ರಲ್ಲಿ ಅನುವಾದಿಸಿದ್ದಾರೆ. 'ಹ್ಯಾಮ್ಲೆಟ್'

ಹೆಸರಿನಲ್ಲಿಯೇ ಜಯರಾಯಾಚಾರ್ಯ, ಜೀವಣ್ಣರಾಯ, ನರಹರಿ, ಶಿವಲಿಂಗಸ್ವಾಮಿ, ಮಾಸ್ತಿ ವೆಂಕಟೇಶ ಅಯ್ಯಂಗಾರ್, ರಾಮಚಂದ್ರದೇವ, ಕೆ.ಎಸ್. ಭಗವಾನ್ ಮೊದಲಾದವರು ಅನುವಾದಿಸಿದ್ದಾರೆ. ಬಿದನೂರು ನಾಯಕನ ಮರಣಾನಂತರ ಆತನ ರಾಣಿ ದುರ್ನಡತೆಗೆ ಬೀಳಲು, ಹೈದರನು ಆ ರಾಜ್ಯವನ್ನು ನುಂಗಿ ನೀರು ಕುಡಿದ ಎಂಬ ಘಟನೆಯ ಆಧಾರದ ಮೇಲೆ ಕುವೆಂಪುಅವರು 'ಹ್ಯಾಮ್ಲೆಟ್' ನಾಟಕವನ್ನು 'ರಕ್ತಾಕ್ಷಿ' ಎಂದು ಅನುವಾದಿಸಿದ್ದಾರೆ. "ತಂದೆಯ ಕೊಲೆ, ತಾಯಿಯ ಹಾದರ ಇವು ಸೇಡಿಗೆ ಅವಕಾಶ ಒದಗಿಸಿ ಅತಿಮಾನುಷ ಶಕ್ತಿಯೊಂದು ಅದಕ್ಕೆ ಪ್ರಚೋದನೆ ಕೊಟ್ಟಾಗ ಸೂಕ್ಷ್ಮ ಮನಸ್ಸೊಂದು ಆ ಸನ್ನಿವೇಶಕ್ಕೆ ಯಾವ ರೀತಿ ಪ್ರತಿಕ್ರಿಯೆ ತೋರಬಹುದು, ಎಂಬುದನ್ನು ಈ ನಾಟಕ ಚಿತ್ರಿಸುತ್ತದೆ".[19] "ಷೇಕ್ಸ್‌ಪಿಯರನ ನಾಟಕಗಳಲ್ಲಿ ವಿರುದ್ಧ ಶಕ್ತಿಗಳ ನಡುವಿನ ಸಂಘರ್ಷ ಪ್ರಧಾನವಾದರೆ ಸಂಸ್ಕೃತ ನಾಟಕಗಳಲ್ಲಿ ವಿರುದ್ಧಶಕ್ತಿಗಳ ನಡುವಿನ ಸಮತೋಲನ ಪ್ರಧಾನವಾಗುತ್ತದೆ".[20]

**(ಐ) ಮ್ಯಾಕ್ಬೆತ್**

ರಂಗಭೂಮಿಗಾಗಿ ರಚಿತವಾದ ನಾಟಕಗಳಲ್ಲಿ ಮ್ಯಾಕ್ಬೆತ್ ನಾಟಕ ಪ್ರಧಾನವಾದದ್ದು. ಷೇಕ್ಸ್‌ಪಿಯರನ ರುದ್ರನಾಟಕ 'ಮ್ಯಾಕ್ಬೆತ್'ನ್ನು ಎಂ.ಎಲ್. ಶ್ರೀಕಂಠೇಗೌಡರು **'ಪ್ರತಾಪರುದ್ರದೇವ'** ಎಂದು 1881ರಲ್ಲಿ ಕನ್ನಡಕ್ಕೆ ತಂದರು. ಕನ್ನಡದ ಮೇಲಿನ ಅಭಿಮಾನಕ್ಕೆ ಕಟ್ಟುಬಿದ್ದ ಗೌಡರು ತಮ್ಮನ್ನು ಈ ಕಾರ್ಯಕ್ಕೆ ತೊಡಗಿಸಿಕೊಂಡರು. ಕನ್ನಡಕ್ಕೆ ಒಗ್ಗುವ ರೀತಿಯಲ್ಲಿ ಪಾತ್ರಗಳನ್ನು ಕೆಲವು ಸನ್ನಿವೇಶಗಳನ್ನು ಬದಲಾಯಿಸಿಕೊಂಡು ಸ್ವಂತಿಕೆ ಮೆರೆಯಲು ಪ್ರಯತ್ನಿಸಿದರು. ಮೂಲಕೃತಿಗೆ ಧಕ್ಕೆ ಬರದ ಹಾಗೆ ನೋಡಿಕೊಂಡರು. ಚೆನ್ನಬಸಪ್ಪನವರು 'ಮ್ಯಾಕ್ಬೆತ್' ಎಂಬ ಹೆಸರಿನಿಂದಲೇ 1881ರಲ್ಲಿ ಅನುವಾದಿಸಿದ್ದಾರೆ. ಡಿ.ವಿ.ಜಿ.ಯವರು 'ಮ್ಯಾಕ್ಬೆತ್' ಎಂದು 1936ರಲ್ಲಿ ಅನುವಾದಿಸಿದರು. ಮೂಲಕ್ಕೆ ನಿಷ್ಠರಾಗಿ ಅನುವಾದ ಮಾಡಿದ ಪ್ರಾಮಾಣಿಕರು ಇವರು. 1975ರಲ್ಲಿ ರಾಮಚಂದ್ರದೇವರ, 'ಮ್ಯಾಕ್ಬೆತ್' ಬಂದಿತು. ಪರ್ವತವಾಣಿಯವರು 'ಮ್ಯಾಕ್ಬೆತ್' ಎಂದೂ 1985ರಲ್ಲಿ ಸುಧಾಕರಅವರು 'ಮ್ಯಾಕ್ಬೆತ್' ಎಂಬ ಹೆಸರಿನಲ್ಲಿ 1989ರಲ್ಲಿ ಕನ್ನಡಕ್ಕೆ ತಂದರು. ಕೆ.ಎಸ್. ಗೋಪಾಲರವರು 'ಮ್ಯಾಕ್ಬೆತ್' ಹೆಸರಿನಲ್ಲಿಯೇ 1977ರಲ್ಲಿ ಪರಿಚಯ ರೂಪದ ಅನುವಾದ ಮಾಡಿದರು.

**(ಒ) ಎ ಮಿಡ್‌ಸಮ್ಮರ್ ನೈಟ್ಸ್ ಡ್ರೀಮ್**

ಷೇಕ್ಸ್‌ಪಿಯರನ ವಿನೋದ ನಾಟಕ. ಇದನ್ನು ಎಂ.ಎಲ್. ಶ್ರೀಕಂಠೇಶಗೌಡರು 'ಪ್ರಮೀಳಾರ್ಜುನೀಯ' ಎಂದು 1896ರಲ್ಲಿ ರೂಪಾಂತರಿಸಿದ್ದಾರೆ. ಇಲ್ಲಿ ಶ್ರೀಕಂಠೇಶಗೌಡರ ರೂಪಾಂತರ ಪ್ರಮುಖವಾದದ್ದು. ಕನ್ನಡದ ನೆಲಕ್ಕೆ ಹೊಂದುವ ಪಾತ್ರಗಳನ್ನು ಸೃಷ್ಟಿಸಿ

ಗಮನ ಸೆಳೆದರು. ಮೂಲದ ಕಥೆಗೆ ಹೊಂದಿಕೆಯಾಗುವಂತೆ ಅರ್ಜುನ ಪ್ರಮೀಳೆಯರ ಪ್ರಣಯದ ಕಥೆ ದೊರೆತದ್ದು ಅವರ ನಾಟಕ ಯಶಸ್ವಿಯಾಗಲು ಸಾಧ್ಯವಾಯಿತು. ಶ್ರೀಕಂಠೇಶಗೌಡರ ಸ್ವತಂತ್ರ ಪ್ರತಿಭೆ ಇಲ್ಲಿ ಸಾಕಾರಗೊಂಡಿದೆ. ನಂತರ ವಾಸುದೇವಾಚಾರ್ಯರು 'ವಸಂತ ಯಾಮಿನೀ ಸ್ವಪ್ನ ಚಮತ್ಕಾರ' ಎಂದು 1916ರಲ್ಲಿ ಅನುವಾದಿಸಿದರೆ, ಕೆ.ಎಸ್. ನಿಸಾರ್ ಅಹಮದ್‌ರವರು 'ಎ ಮಿಡ್‌ಸಮ್ಮರ್ ನೈಟ್ಸ್ ಡ್ರೀಮ್'ನ್ನು 1974ರಲ್ಲಿ ಅನುವಾದಿಸಿದ್ದಾರೆ. "ಎ ಮಿಡ್‌ಸಮ್ಮರ್ ನೈಟ್ಸ್ ಡ್ರೀಮ್ ವೈನೋದಿಕವೆಂಬುರಲ್ಲಿ ಸಂಶಯವಿಲ್ಲ. ಎಲಿಸಬೆತ್ ಕಾಲದವರಿಗೆ ಪ್ರಿಯವಾದ ಪ್ರಣಯ ವಿಶ್ಲೇಷಣ – ಮೃದುವಾದ ಹಾಸ್ಯದಿಂದ ಕೂಡಿದ ವಿಶ್ಲೇಷಣ ಅದರಲ್ಲಿ ಮುಖ್ಯವಾಗುತ್ತದೆ".[21]

## ಷೇಕ್ಸ್‌ಪಿಯರ್ ನಾಟಕಗಳ ಪ್ರದರ್ಶನಗಳು

ಷೇಕ್ಸ್‌ಪಿಯರ್ ಕಾಲದಲ್ಲಿ (16ನೇ ಶತಮಾನ) ರಂಗಭೂಮಿ ಶೈಶವ ಅವಸ್ಥೆಯಲ್ಲೇ ಇತ್ತು. ಅಂದರೆ ರಂಗಸ್ಥಳ ತುಂಬಾ ಸರಳವಾಗಿತ್ತು. ಒಂದು ದೊಡ್ಡ ಅಟ್ಟಣಿ, ಅದರ ಮೇಲೆ ತೆರೆದ ಆಕಾಶ, ಕೆಳಗೆ ವೃತ್ತಾಕಾರದ ನೆಲ, ಅದರ ಸುತ್ತ ಪ್ರೇಕ್ಷಕರು ಕುಳಿತುಕೊಳ್ಳಲು ಏರಿಸಿ, ಚಪ್ಪರ ಹೊದಿಸಿದ ಮೂರು ಅಂತಸ್ತಿನ ಗ್ಯಾಲರಿ, ರಂಗದ ಮಧ್ಯಭಾಗದಲ್ಲಿ ಕಟ್ಟಿದ ಮರದ ಅಟ್ಟ ಇದರ ಮೇಲೆ ನಡುಹಗಲೇ ಆಟ ನಡೆಯುತ್ತಿತ್ತು. ನಾಟಕ ನೋಡಲು ಅರಮನೆ ಆಸ್ಥಾನಿಕರು, ಶ್ರೀಮಂತರು, ವಿದ್ಯಾವಂತರು, ಜನಸಾಮಾನ್ಯರು ಬರುತ್ತಿದ್ದರು. ರಾಣಿ ಎಲಿಜಬೆತ್ ನಾಟಕದ ಬಗ್ಗೆ ಹೆಚ್ಚು ಆಸಕ್ತಿ ಹೊಂದಿದವಳಾದ್ದರಿಂದ ನಾಟಕ ಬೆಳವಣಿಗೆಗೆ ಅನುಕೂಲವಾಯಿತು. ಷೇಕ್ಸ್‌ಪಿಯರ್ ಲಂಡನ್ನಿಗೆ ಬಂದು ನಾಟಕ ವೃತ್ತಿಜೀವನವನ್ನು ಆರಂಭಿಸಿದಾಗ ಸಾರ್ವಜನಿಕ ನಾಟಕಗೃಹ, ಖಾಸಗೀ ನಾಟಕಗೃಹ, ವಸತಿಗೃಹಗಳ ಮುಂಭಾಗ, ಸರದಾರರ ವಿಶಾಲಭವನಗಳು, ರಾಣಿಯ ಅರಮನೆ, ನಗರಭವನ ಮುಂತಾದ ವಿವಿಧ ಸ್ಥಳಗಳಲ್ಲಿ ನಾಟಕಗಳನ್ನು ಅಭಿನಯಿಸುತ್ತಿದ್ದರು.

ನಾಟಕ ಕಂಪನಿಯೊಂದರಲ್ಲಿ ಪಾಲುದಾರನಾಗಿದ್ದ ಅದರಲ್ಲೂ ವ್ಯಾವಹಾರಿಕ ಮನುಷ್ಯನಾಗಿದ್ದ ಷೇಕ್ಸ್‌ಪಿಯರ್ ಒಬ್ಬ ರಂಗಭೂಮಿಯ ಮನುಷ್ಯ. ಈ ಕಾರಣದಿಂದಾಗಿ ರಂಗಕ್ಕೆ ಸುಲಭವಾಗಿ ಅಳವಡಿಸಲಾಗುವ ನಾಟಕಗಳ ರಚನೆ ಇವನಿಗೆ ಕರಗತವಾಗಿತ್ತು. ಈ ಕಾರಣದಿಂದಾಗಿ ಷೇಕ್ಸ್‌ಪಿಯರನ ಬಹುತೇಕ ನಾಟಕಗಳು ಪ್ರದರ್ಶನದಲ್ಲೂ ಕೂಡ ಯಶಸ್ಸು ಕಂಡಿವೆ. ಷೇಕ್ಸ್‌ಪಿಯರನ ಕಾಲಕ್ಕೆ ನಾಟಕಕಲೆ ಇಂಗ್ಲೆಂಡಿನ ಧಾರ್ಮಿಕ ಹಿಡಿತದಿಂದ ಬಿಡುಗಡೆಗೊಂಡು ಮನರಂಜನೆಯತ್ತ ತಿರುಗಿತ್ತು. ಈ ಕಾರಣದಿಂದಾಗಿ ಹೆಚ್ಚು ಹೆಚ್ಚು ನಾಟಕಗಳು ಪ್ರದರ್ಶನಗೊಳ್ಳಲು ಸಾಧ್ಯವಾಯಿತು.

ಷೇಕ್ಸ್‌ಪಿಯರರ ಅನುವಾದ-ರೂಪಾಂತರ ನಾಟಕಗಳಾದ ಒಥೆಲೊ-'ಶೂರಸೇನ ಚರಿತೆ' ಹೆಸರಿನಿಂದಲೂ, 'ಪ್ರಮೀಳಾರ್ಜುನೀಯ', 'ವಸಂತಯಾಮಿನೀ ಸ್ವಪ್ನ ಚಮತ್ಕಾರ' ಮುಂತಾದ ಹೆಸರುಗಳಿಂದ-ಎ ಮಿಡ್ ಸಮ್ಮರ್ ನೈಟ್ಸ್ ಡ್ರೀಮ್, 'ಪ್ರತಾಪರುದ್ರದೇವ', 'ಗೊಂಬೆ ಮ್ಯಾಕ್‌ಬೆತ್', 'ಮಾರನಾಯಕನ ದೃಷ್ಟಾಂತ' ಮುಂತಾದ ಹೆಸರುಗಳಿಂದ ಮ್ಯಾಕ್‌ಬೆತ್, 'ರಾಮವರ್ಮ ಲೀಲಾವತಿ 'ರಾಮವರ್ಮ ಲೀಲಾವತಿ, ಚರಿತ್ರೆ', 'ರಮೇಶ ಲಲಿತ' ಮೊದಲಾದ ಹೆಸರಿನಿಂದ-ರೋಮಿಯೊ ಅಂಡ್ ಜ್ಯೂಲಿಯೆಟ್, 'ಹೇಮಂತ', 'ಸಂತಾಪಕ', 'ರಕ್ತಾಕ್ಷಿ' ಮುಂತಾದ ಹೆಸರಿನ ಹ್ಯಾಮ್ಲೆಟ್, 'ವೆನಿಸ್ಸಿನ ವ್ಯಾಪಾರಿ', 'ವೆನಿಸ್‌ನಗರದ ವಣಿಕ', 'ವೇಣುಪುರಿಯ ವರ್ತಕ', 'ಸುರತನಗರದ ಶ್ರೇಷ್ಠಿ' ಮೊದಲಾದ ಹೆಸರಿನಿಂದ-'ದಿ ಮರ್ಚೆಂಟ್ ಆಫ್ ವೆನಿಸ್', 'ಬಿರುಗಾಳಿ' 'ಚಂಡಮಾರುತ' ಎಂಬ ಹೆಸರಿನ-ದಿ ಟೆಂಪೆಸ್ಟ್ ಮೊದಲಾದ ನಾಟಕಗಳು ಕನ್ನಡ ರಂಗಭೂಮಿಯಲ್ಲಿ ಹೆಚ್ಚು ಹೆಚ್ಚು ಪ್ರದರ್ಶನಗೊಂಡವು.

ಕೆರೂರು ವಾಸುದೇವಾಚಾರ್ಯರು ಅನುವಾದಿಸಿದ 'ವಸಂತಯಾಮಿನೀ ಸ್ವಪ್ನ ಚಮತ್ಕಾರ' ಅವರೇ ಸ್ಥಾಪಿಸಿದ ಬಾಗಲಕೋಟೆಯ ವಾಸುದೇವ ವಿನೋದಿನಿ ನಾಟ್ಯಸಭೆಯಲ್ಲಿ 1927ರಲ್ಲಿ ಪ್ರದರ್ಶನವಾಯಿತು. ಮೈಸೂರಿನ ಡಿ. ಲಕ್ಷ್ಮಯ್ಯನವರು 1919ರಲ್ಲಿ 'ಲಿಟರರಿ ಅಂಡ್ ಡ್ರಮಾಟಿಕ್ ಅಸೋಸಿಯೇಷನ್' ಎಂಬ ವಿಲಾಸೀ ನಾಟಕತಂಡವನ್ನು ಕಟ್ಟಿದರು. ಇದರಲ್ಲಿ ಒಥೆಲೋ (ಶೂರಸೇನ ಚರಿತೆ) ಹೆಚ್ಚು ಪ್ರದರ್ಶನಗೊಂಡಿತು. ಮೈಸೂರಿನ 'ರಾಜಧಾನಿ ನಾಟಕ ಮಂಡಳಿ' ಎ. ಆನಂದರಾಯರ 'ರಾಮವರ್ಮ ಲೀಲಾವತಿ' ನಾಟಕವನ್ನು ಪ್ರದರ್ಶಿಸಿತು. ಇದೇ ನಾಟಕವನ್ನು ಮೈಸೂರಿನ ರತ್ನಾವಳೀ ನಾಟಕ ಸಭಾದವರು ಅಭಿನಯಿಸಿದರು. 'ರಾಮವರ್ಮ ಲೀಲಾವತಿ' ನಾಟಕವು ವರದಾಚಾರ್ಯರ ಕಂಪನಿಯಲ್ಲಿಯೂ ಹೆಚ್ಚು ಪ್ರಯೋಗಗೊಂಡು ತುಂಬಾ ಜನಪ್ರಿಯವಾಯಿತು. 'ರೋಮಿಯೋ ಜ್ಯೂಲಿಯೆಟ್' ನಾಟಕದ ವಸ್ತು ಸರ್ವಕಾಲೀನವಾಗಿದ್ದು, ಎಲ್ಲಾ ಪ್ರದೇಶಗಳಿಗೂ ಒಗ್ಗುವ ವಸ್ತು. ಅದರಲ್ಲೂ ಭಾರತೀಯ ರಂಗಭೂಮಿಗ್ಬೆ ಹತ್ತಿರವಾಗಿದ್ದು, ಹೆಚ್ಚು ಪ್ರಯೋಗಗಳನ್ನು ಕಂಡಿದೆ. ಶ್ರೀಕಂಠೇಶ್ವರ ನಾಟಕ ಸಭಾದವರು 'ಸೀತಾಸ್ವಯಂವರ', 'ಪ್ರಮೀಳಾರ್ಜುನೀಯ' ನಾಟಕವನ್ನು ಪ್ರದರ್ಶಿಸಿದರು. ಮೈಸೂರಿನ ಮಹಾರಾಜ ಕಾಲೇಜಿನ ನಾಟಕ ಮಂಡಲಿಯವರು ಷೇಕ್ಸ್‌ಪಿಯರ್ ನಾಟಕವನ್ನು ಆಡಲು ಹೆಸರಾಗಿದ್ದರು. ಆಧುನಿಕ ಕನ್ನಡ ನಾಟಕ ಸಾಹಿತ್ಯದ ಸಂದರ್ಭದಲ್ಲಿ ಕುವೆಂಪುರವರು ರೂಪಾಂತರಿಸಿದ 'ರಕ್ತಾಕ್ಷಿ' ಮತ್ತು 'ಬಿರುಗಾಳಿ' ನಾಟಕಗಳು ಹೆಚ್ಚುಹೆಚ್ಚಾಗಿ ಪ್ರದರ್ಶನಗೊಳ್ಳುತ್ತಿವೆ. ಷೇಕ್ಸ್‌ಪಿಯರ್ ನಾಟಕಗಳು ಕನ್ನಡಕ್ಕೆ ರೂಪಾಂತರಗೊಂಡಿದ್ದೆ ಪ್ರದರ್ಶನದ ಉದ್ದೇಶಕ್ಕಾಗಿ. ಸಾಮಾನ್ಯ ಪ್ರೇಕ್ಷಕ ಮತ್ತು ನಟನನ್ನು ಗಮನದಲ್ಲಿಟ್ಟುಕೊಂಡು ಷೇಕ್ಸ್‌ಪಿಯರ್ ನಾಟಕಗಳನ್ನು ಕನ್ನಡಕ್ಕೆ ರೂಪಾಂತರಿಸಲಾಯಿತು. ಈ ರೂಪಾಂತರವೇ ಪ್ರದರ್ಶನಕ್ಕೆ ಹೆಚ್ಚು ಸಹಕಾರಿಯಾಯಿತು.

---

# ಅಧ್ಯಾಯ – 4

# ಶ್ರೀಕಂಠೇಶಗೌಡರ ಜೀವನ ಮತ್ತು ಕೃತಿಗಳು

## I. ಶ್ರೀಕಂಠೇಶಗೌಡರ ಜೀವನ

### (ಅ) ಬಾಲ್ಯ

ಎಂ. ಎಲ್. ಶ್ರೀಕಂಠೇಶಗೌಡರು ಮಂಡ್ಯಜಿಲ್ಲೆಯ ಮದ್ದೂರು ತಾಲ್ಲೂಕಿನ ದೇಶಹಳ್ಳಿಯಲ್ಲಿ 1852ರಲ್ಲಿ ಸುಭೇದಾರ್ ಬೈರೇಗೌಡರ ಎರಡನೇ ಮಗನಾಗಿ ಜನಿಸಿದರು. ದೇಶಹಳ್ಳಿ, ಶಿವಪುರ ರೈಲು ನಿಲ್ದಾಣದಿಂದ ಮೂರು ಮೈಲಿ ದೂರದಲ್ಲಿದೆ. ಶ್ರೀಕಂಠೇಶಗೌಡರ ವಂಶವೃಕ್ಷ ಹಕ್ಕಿಗೌಡ ಎಂಬುವರಿಂದ ಆರಂಭವಾಗುತ್ತದೆ. ನಾಗಮಂಗಲ ಭಾಗದಲ್ಲಿ ಭೀಕರ ಬರಗಾಲ ತೋರಿದಾಗ ಇವರ ಪೂರ್ವಿಕರು ಅಲ್ಲಿನ ಮಲ್ಲನಾಯಕನಹಳ್ಳಿಯಿಂದ ಮದ್ದೂರು ತಾಲ್ಲೂಕಿನ ದೇಶಹಳ್ಳಿಗೆ ವಲಸೆ ಬಂದರೆಂಬ ಅಭಿಪ್ರಾಯವಿದೆ. ಹಕ್ಕಿಗೌಡರು ದೇಶಹಳ್ಳಿಯಲ್ಲಿ ಆಸ್ತಿಕೊಂಡು, ಮನೆಕಟ್ಟಿಕೊಂಡು ಭದ್ರವಾಗಿ ನೆಲೆಯೂರಿದರು. ಈ ವಂಶದ ಮೂರನೇ ಪೀಳಿಗೆಯಲ್ಲಿ ಲಿಂಗೇಗೌಡ ಎಂಬುವರು ವಿದ್ಯಾವಂತರಾಗಿ ಸ್ವಸಾಮರ್ಥ್ಯದಿಂದ ಸುಭೇದಾರ ಪದವಿಗೇರಿದ್ದರು. ಲಿಂಗೇಗೌಡರಿಗೆ ನಾಲ್ಕು ಜನ ಗಂಡು ಮಕ್ಕಳಿದ್ದರು. ಪುಟ್ಟೇಗೌಡ, ಬೈರೇಗೌಡ, ಅಣ್ಣೇಗೌಡ ಮತ್ತು ತಮ್ಮೇಗೌಡ. ಲಿಂಗೇಗೌಡರು ತಮ್ಮ ನಾಲ್ಕು ಜನ ಗಂಡು ಮಕ್ಕಳಿಗೆ ಇಂಗ್ಲಿಷ್ ಶಿಕ್ಷಣ ಕೊಡಿಸಿದರು. ಲಿಂಗೇಗೌಡರ ದಕ್ಷ ಹಾಗೂ ಪ್ರಾಮಾಣಿಕ ಆಡಳಿತವನ್ನು ಕಂಡ ಸರ್ಕಾರ ಈ ನಾಲ್ಕು ಮಂದಿಯನ್ನು ಅಮಲ್ದಾರರನ್ನಾಗಿ ನೇಮಿಸಿಕೊಂಡಿತು.

"ಶ್ರೀಕಂಠೇಶಗೌಡರು ತಮ್ಮ ಆರನೆಯ ವಯಸ್ಸಿನಲ್ಲಿಯೇ ತಾತ ಲಿಂಗೇಗೌಡರ ಹತ್ತಿರ ಬಂದರು. ಲಿಂಗೇಗೌಡರಿಗೆ ತಮ್ಮ ಪ್ರೀತಿಯ ತಾತ ಹಕ್ಕಿಗೌಡರನ್ನು ಹೋಲುತ್ತಿದ್ದ ಈ ಹುಡುಗನನ್ನು ಕಂಡರೆ ತುಂಬಾ ಅಕ್ಕರೆ"[1] ಲಿಂಗೇಗೌಡರು ತಮ್ಮ ಅಧಿಕಾರಕ್ಕೆ ಸೇರಿದ ತಾಲೂಕುಗಳ ಹಳ್ಳಿಗಳಿಗೆಲ್ಲಾ ಭೇಟಿಕೊಡುತ್ತಿದ್ದರು. ಇಂತಹ ಸಂದರ್ಭದಲ್ಲಿ ಮೊಮ್ಮಗ ಶ್ರೀಕಂಠೇಶಗೌಡರನ್ನು ಜೊತೆಯಲ್ಲಿ ಕರೆದೊಯ್ಯುತ್ತಿದ್ದರು. "ಲಿಂಗೇಗೌಡರಿಗೆ ಯಕ್ಷಗಾನ ಬಯಲಾಟ ಮುಂತಾದ ಜನಪದ ಕಲೆಗಳ ಬಗ್ಗೆ ತುಂಬಾ ಆಸಕ್ತಿ. ಆದುದರಿಂದ ತಾವು ತಂಗಿದ ಹಳ್ಳಿಗಳಲ್ಲಿ ಅಲ್ಲಿನ ಕಲಾವಿದರನ್ನು ಕರೆಯಿಸಿ ಯಕ್ಷಗಾನ ಬಯಲಾಟ ಆಡಿಸುತ್ತಿದ್ದರು. ಬಾಲಕ ಶ್ರೀಕಂಠೇಶಗೌಡರ ಮೇಲೆ ಈ ಜನಪದ ಕಲೆಗಳು ಅಪಾರ ಪರಿಣಾಮ ಬೀರಿದ್ದವು. ಬಯಲಾಟದ ಪಾತ್ರಗಳನ್ನು ನೋಡಿದ ಬಾಲಕನಿಗೆ ತಾನೂ ಹಾಗೆ ಪಾತ್ರ ಮಾಡಬೇಕೆಂಬ ಮನಸ್ಸಾಗುತ್ತಿತ್ತು"[2] ಬೇಸಿಗೆಯ ಕಾಲದಲ್ಲಿ

ಎಲ್ಲರೂ ದೇಶಹಳ್ಳಿ ಸೇರುತ್ತಿದ್ದರು. ಸುಭೇದಾರ ತಂದೆ, ಅಮಲ್ದಾರರ ಮಕ್ಕಳು ಊರಿಗೆ ಬರುತ್ತಾರೆಂದರೆ ಸುತ್ತಮುತ್ತಲಿನ ಜನರೆಲ್ಲಾ ಸಂತೋಷದಿಂದ ಸೇರುತ್ತಿದ್ದರು. ಅಲ್ಲಿ ಯಕ್ಷಗಾನ ಬಯಲಾಟ, ಕಾವ್ಯವಾಚನ ಇದ್ದೇ ಇರುತ್ತಿದ್ದವು. ಎಳೆಯ ಶ್ರೀಕಂಠೇಶಗೌಡರ ಹೃದಯದಲ್ಲಿ ಸಾಹಿತ್ಯದ ಬಗ್ಗೆ ಆಸಕ್ತಿ ಮೂಡಿತು.

**(ಆ) ಶಿಕ್ಷಣ**

ಕುಣಿಗಲ್‌ನಲ್ಲಿ ಲಿಂಗೇಗೌಡರು ತಮ್ಮ ಮೊಮ್ಮಕ್ಕಳಿಗೆ ಕನ್ನಡ, ಇಂಗ್ಲಿಷ್ ಮತ್ತು ಸಂಸ್ಕೃತ ಕಲಿಸುವ ಏರ್ಪಾಡು ಮಾಡಿದ್ದರು. ನುರಿತ ಉಪಾಧ್ಯಾಯರನ್ನು ನೇಮಿಸಿಕೊಂಡಿದ್ದರು. ಶ್ರೀಕಂಠೇಶಗೌಡರು ಓದಿನಲ್ಲಿ ತುಂಬಾ ಚುರುಕಾಗಿದ್ದರು. ಉಪಾಧ್ಯಾಯರು ಹೇಳಿದ್ದನ್ನೆಲ್ಲಾ ಚೆನ್ನಾಗಿ ಗ್ರಹಿಸುತ್ತಿದ್ದರು. ಬಾಲಕನಿಗೆ ಕನ್ನಡದ ಬಗ್ಗೆ ವಿಶೇಷ ಆಸಕ್ತಿ. ತಾತನ ಗ್ರಂಥ ಸಂಗ್ರಹದಿಂದ ಕುಮಾರವ್ಯಾಸ ಭಾರತ, ಜೈಮಿನಿಭಾರತ ಮುಂತಾದುವನ್ನು ಓದಿದರು. ಜೊತೆಗೆ ಇಂಗ್ಲಿಷ್ ಮತ್ತು ಸಂಸ್ಕೃತದಲ್ಲಿಯೂ ಬಾಲಕ ಶ್ರೀಕಂಠೇಶಗೌಡರು ಹಿಂದೆ ಬೀಳಲಿಲ್ಲ.

ಆ ಕಾಲಕ್ಕಾಗಲೇ ಇಂಗ್ಲಿಷ್ ಶಿಕ್ಷಣ ಮತ್ತು ಶಾಲೆಗಳು ದೇಶದಾದ್ಯಂತ ಆರಂಭವಾಗಿ ನಡೆಯುತ್ತಿದ್ದವು. ಶ್ರೀಕಂಠೇಶಗೌಡರು ಕುಣಿಗಲಿನ ಮಾಧ್ಯಮಿಕ ಶಾಲೆಯನ್ನು ಸೇರಿದರು. ಶ್ರೀಕಂಠೇಶಗೌಡರು ತಾತ ಸುಬೇಧಾರ್ ಲಿಂಗೇಗೌಡರ ಆಶ್ರಯದಲ್ಲಿ ಬೆಳೆದಿದ್ದರಿಂದ ತಂದೆಯ ಹೆಸರಿರಬೇಕಾದ ಕಡೆ ಲಿಂಗೇಗೌಡರ ಹೆಸರೇ ನಮೂದಿತವಾಯಿತು. ಮನೆಯಲ್ಲಿ ಒಳ್ಳೆಯ ತರಬೇತಿ ದೊರಕಿದ್ದರಿಂದ ಅವರು ತರಗತಿಯಲ್ಲಿ ಮೊದಲನೆಯವರಾಗಿರುತ್ತಿದ್ದರು. ನಾಲ್ಕು ವರ್ಷಗಳ ಕಾಲ ಕುಣಿಗಲ್ಲಿನಲ್ಲಿ ಓದಿದ ಗೌಡರು ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದುದು ಲಿಂಗೇಗೌಡರಿಗೆ ತುಂಬಾ ಸಂತೋಷ ತಂದಿತು. ರಜೆ ಬಂದೊಡನೆಯೇ ಶ್ರೀಕಂಠೇಶಗೌಡರು ದೇಶಹಳ್ಳಿಗೆ ಓಡಿ ಬರುತ್ತಿದ್ದರು. ತಾತ ಮೊಮ್ಮಗ ಸಾಹಿತ್ಯದ ಬಗ್ಗೆ ಚರ್ಚಿಸುತ್ತಿದ್ದರು. ಪಂಡಿತರು, ಕಲಾವಿದರು ಮೊದಲಾದವರೆಲ್ಲಾ ತಾತನೊಂದಿಗೆ ಮಾತನಾಡುತ್ತಿದ್ದಾಗ ಇವರು ಇರುತ್ತಿದ್ದರು. ಲಿಂಗೇಗೌಡರು ಕಾರ್ಯನಿಮಿತ್ತ ಇಂಗ್ಲಿಷ್ ಅಧಿಕಾರಿಗಳನ್ನು ನೋಡಲು ಹೋಗುವಾಗ ಮೊಮ್ಮಗನನ್ನು ಜೊತೆಯಲ್ಲಿ ಕರೆದುಕೊಂಡು ಹೋಗುತ್ತಿದ್ದರು. ಹೀಗಾಗಿ ಚಿಕ್ಕಂದಿನಿಂದಲೂ ನಾನಾ ವಿಷಯಗಳನ್ನು ತಿಳಿದುಕೊಳ್ಳಲು ಅವಕಾಶವಾಯಿತು. ಯಾವುದಾದರೂ ಗ್ರಂಥವನ್ನು ಓದಿದಾಗ ತಾನು ಇಂಥ ಗ್ರಂಥವೊಂದನ್ನು ಬರೆಯಬೇಕೆಂಬ ಆಸೆ ಹೆಚ್ಚಾಗುತ್ತಿತ್ತು. ಅದಕ್ಕೆ ಬೇಕಾದ ವಾತಾವರಣ, ತಾತ ಲಿಂಗೇಗೌಡರ ಪ್ರೋತ್ಸಾಹವೂ ಜೊತೆಗಿತ್ತು.

"ಲಿಂಗೇಗೌಡರು ಅಧಿಕಾರದಲ್ಲಿದ್ದುದರಿಂದ ಆಂಗ್ಲರ ಮಕ್ಕಳಿಗೆ ಶಿಕ್ಷಣ ನೀಡುವಂಥ ಯೂರೋಪಿಯನ್ ಪ್ರೌಢಶಾಲೆಯೊಂದರಲ್ಲಿಯೇ ಶ್ರೀಕಂಠೇಶಗೌಡರಿಗೆ ಪ್ರವೇಶ ದೊರೆಯಿತು. ಆದರೆ ಅಲ್ಲಿಯ ವಾತಾವರಣ, ತಮ್ಮ ಧರ್ಮವೇ ಮೇಲು ಎಂಬ

ಇಂಗ್ಲಿಷರ ಅಹಂಕಾರ, ಶ್ರೀಕಂಠೇಶಗೌಡರು ಮನಸ್ಸಿನಲ್ಲಿ ಕೋಪವನ್ನು ತರಿಸಿದವು"[3] ಆತ್ಮಾಭಿಮಾನಿಯಾದ ಶ್ರೀಕಂಠೇಶಗೌಡರಿಗೆ ಈ ವಿಚಾರವಾಗಿ ತಾತನಿಗೆ ಪತ್ರದ ಮೂಲಕ ಬರೆದು ತಿಳಿಸಿದರು. ತಾತನ ಮಾರ್ಗದರ್ಶನದಲ್ಲಿ ಯೂರೋಪು ಮಾದರಿಯ ಪ್ರೌಢಶಾಲೆಯಿಂದ ಭಾರತೀಯ ಮಾದರಿಗೆ ಬದಲಾಯಿಸಿಕೊಂಡರು. ಎಂಟ್ರೆನ್ಸ್ ಪರೀಕ್ಷೆಯಲ್ಲಿ ಉತ್ತೀರ್ಣರಾದ ಶ್ರೀಕಂಠೇಶಗೌಡರು ಸೆಂಟ್ರಲ್ ಕಾಲೇಜಿನಲ್ಲಿ ಬಿ.ಎ.ತರಗತಿಗೆ ಸೇರಿದರು. ಅಷ್ಟು ಹೊತ್ತಿಗೆ ಈ ಪ್ರತಿಭಾವಂತ ವಿದ್ಯಾರ್ಥಿಯ ಹೆಸರು ಸೆಂಟ್ರಲ್ ಕಾಲೇಜಿನ ಜಾನ್ ಕುಕ್ ಅವರ ಕಿವಿಗೂ ಬಿತ್ತು. ಇದರಿಂದ ಅವರ ಜ್ಞಾನಾರ್ಜನೆಗೆ ತಕ್ಕ ಪ್ರೋತ್ಸಾಹ ದೊರೆಯಿತು. "ಸೆಂಟ್ರಲ್ ಕಾಲೇಜಿನಲ್ಲಿ ಇವರು ಚರ್ಚಾಗೋಷ್ಠಿಗಳಲ್ಲಿ ಭಾಗವಹಿಸುತ್ತಿದ್ದರು. ಕನ್ನಡ ವ್ಯಾಕರಣ ಮತ್ತು ಛಂದಸ್ಸುಗಳನ್ನು ಆಳವಾಗಿ ಅಭ್ಯಾಸ ಮಾಡಿದರು.ಇಂಗ್ಲಿಷ್‌ನಲ್ಲಿರುವ ಎಲ್ಲಾ ಸಾಹಿತ್ಯ ಪ್ರಕಾರಗಳೂ ಕನ್ನಡದಲ್ಲಿ ಏಕಿರಬಾರದು? ಎಂಬ ಪ್ರಶ್ನೆ ಅವರನ್ನು ಸದಾ ಕಾಡುತ್ತಿತ್ತು"[4]. ತಮ್ಮ ಇಪ್ಪತ್ತನಾಲ್ಕನೇ ವಯಸ್ಸಿನಲ್ಲಿ ಶ್ರೀಕಂಠೇಶಗೌಡರು ಬಿ.ಎ.ಪದವೀಧರರಾದರು. ತಮ್ಮ ತಾತ ಲಿಂಗೇಗೌಡರಿಗೆ ಮೊಮ್ಮಗ ನ್ಯಾಯಾಧೀಶನೋ, ಕೌನ್ಸಿಲರೊ ಆಗಬೇಕೆಂಬ ಆಸೆಯಿತ್ತು. ಕನ್ನಡ ನಾಡಿನಲ್ಲಿ ಆ ಅನುಕೂಲವಿರಲಿಲ್ಲ, ದೂರದ ಮದರಾಸಿಗೆ ಹೋಗಬೇಕಾಗಿತ್ತು. ಲಿಂಗೇಗೌಡರು ಮೊಮ್ಮಗನಿಗೆ ಧೈರ್ಯಹೇಳಿ ಮದರಾಸಿಗೆ ಕಳುಹಿಸಿದರು. ಶ್ರೀಕಂಠೇಶಗೌಡರು ಎರಡು ವರ್ಷಗಳ ಕಾಲ ಮದರಾಸಿನಲ್ಲಿದ್ದು ತಮ್ಮ ಬಿ.ಎಲ್.ಪದವಿಯನ್ನು ಪಡೆದರು. ಈ ಸಂದರ್ಭದಲ್ಲಿ ತಾತ ಲಿಂಗೇಗೌಡರು ತೀರಿಕೊಂಡರು. ಇದು ಅವರು ಮನಸ್ಸಿಗೆ ಅಪಾರ ದುಃಖವನ್ನುಂಟುಮಾಡಿತು.

### (ಇ) ಕೌಟುಂಬಿಕ ಜೀವನ

ಶ್ರೀಕಂಠೇಶಗೌಡರು 1885ರಲ್ಲಿ ಸ್ವತಂತ್ರವಾಗಿ ವಕೀಲಿ ವೃತ್ತಿಯನ್ನು ಪ್ರಾರಂಭಿಸುವ ಹೊತ್ತಿಗೆ 1880 ರಲ್ಲಿ ಸುಬ್ಬಮ್ಮನವರನ್ನು ವಿವಾಹವಾಗಿದ್ದರು. ಇವರು ಶ್ರೀಕಂಠೇಶಗೌಡರ ಚಂದಗಾಲುವಿನ ಅಕ್ಕನ ಮಗಳು. ಆದರ್ಶ ಸತಿಪತಿಗಳಾಗಿದ್ದ ಇವರಿಗೆ ಒಂದು ಹೆಣ್ಣು, ಎರಡು ಗಂಡು ಮಕ್ಕಳಿದ್ದರು. ಗೌಡರ ಸಂಸಾರ ನೆಮ್ಮದಿಯಿಂದ ಸಾಗುತ್ತಿತ್ತು. ಆದರೆ ಸುಬ್ಬಮ್ಮನವರು ದೀರ್ಘಬಾಳ್ವೆಯನ್ನು ಪಡೆದು ಬಂದಿರಲಿಲ್ಲ. 1896ರಲ್ಲಿ ಅಕಾಲ ಮೃತ್ಯುವಿಗೆ ತುತ್ತಾದರು. ಈ ಸಂದರ್ಭದಲ್ಲಿ ಗೌಡರಿಗೆ ನ್ಯಾಯಾಧೀಶ ಪದವಿ ಸಿಕ್ಕಿತು. ಮೈಸೂರಿನಲ್ಲಿದ್ದಾಗ ಪತ್ನಿಯ ಸಾವು ಸದಾ ಕಾಡುತ್ತಿತ್ತು. ಮಕ್ಕಳನ್ನು ತಮ್ಮ ತಾಯಿಯ ಬಳಿ ಬಿಟ್ಟು ಹಾಸನಕ್ಕೆ ಹೊರಟರು. ಮಕ್ಕಳು ಅಜ್ಜಿಯ ಆಸರೆಯಲ್ಲಿ ತಾಯಿ ಇಲ್ಲದ ನೋವನ್ನು ಸ್ವಲ್ಪಮಟ್ಟಿಗೆ ಮರೆತವು. ಆದರೆ ಗೌಡರಿಗೆ ಸಾಹಿತ್ಯ ಸ್ಫೂರ್ತಿಯಾಗಿದ್ದ ಪತ್ನಿಯ ಸಾವು ತುಂಬಲಾರದ ನಷ್ಟವಾಯಿತು.

ಮನೆಯ ಹಿರಿಯರು, ಸ್ನೇಹಿತರು ಗೌಡರನ್ನು ಮತ್ತೊಂದು ಮದುವೆ ಮಾಡಿಕೊಳ್ಳುವಂತೆ ಒತ್ತಾಯಿಸುತ್ತಿದ್ದರು. ತಮ್ಮ ಮಕ್ಕಳನ್ನು ತಾವು ನೋಡಿಕೊಳ್ಳಲಾಗದ

ಸ್ಥಿತಿಯಲ್ಲಿ, ಮಕ್ಕಳಿಗೆ ತಾಯಿಯೊಬ್ಬಳ ಅವಶ್ಯಕತೆಯಿರುವುದು ಶ್ರೀಕಂಠೇಶಗೌಡರ ಮನಸ್ಸಿನಲ್ಲಿ ಮೂಡಿದವು.ಈ ಸಂದರ್ಭದಲ್ಲಿ ನಂಜನಗೂಡಿನ ಹೆಸರಾಂತ ಮನೆತನದವರಾದ ಕರೋಹಿಹಟ್ಟಿ ಸಿದ್ದಪ್ಪನವರ ಮಗಳು ಭಗೀರಥಮ್ಮ ಎಂಬ ಹೆಣ್ಣುಮಗಳು ಶ್ರೀಕಂಠೇಶಗೌಡರನ್ನು ಮದುವೆಯಾಗಲು ಹಠ ಹಿಡಿದಿರುವುದಾಗಿ ತಿಳಿದು ಬಂದಿತು. ಈ ಸುದ್ದಿಯು ಶ್ರೀಕಂಠೇಶಗೌಡರಿಗೂ ತಿಳಿದು ಆಶ್ಚರ್ಯವುಂಟಾಯಿತು. ಅನಂತರ ಶ್ರೀಕಂಠೇಶಗೌಡರು ಮದುವೆಗೆ ಒಪ್ಪಬೇಕಾಯಿತು. ಸುಬ್ಬಮ್ಮನವರ ಸ್ಥಾನವನ್ನು ಭಗೀರಥಮ್ಮ ಎಲ್ಲಾ ವಿಧದಲ್ಲಿಯೂ ತುಂಬಿದರು. ಶ್ರೀಕಂಠೇಶಗೌಡರು ಬೆಂಗಳೂರಿಗೆ ವರ್ಗವಾದ ಮೇಲೆ ಬಸವನಗುಡಿಯಲ್ಲಿ ಮನೆಯೊಂದನ್ನು ಕಟ್ಟಿಸಿದರು. 1910ರಲ್ಲಿ ನಿವೃತ್ತರಾದ ಮೇಲೆ ವಿಶ್ರಾಂತಿ ಜೀವನ ಬೆಂಗಳೂರಿನಲ್ಲಿಯೇ ನಡೆಯಿತು. 1926 ನವೆಂಬರ್ 26ರಂದು ಟೈಫಾಯಿಡ್‌ಖಾಯಿಲೆಗೆ ತುತ್ತಾಗಿ ತಮ್ಮ 74ನೇ ವಯಸ್ಸಿನಲ್ಲಿ (1852–1926) ರಲ್ಲಿ ಕೊನೆಯುಸಿರೆಳೆದರು.

### (ಈ) ವೃತ್ತಿ

ಮದರಾಸಿನಿಂದ ಬಿ.ಎಲ್.ಪದವಿಯನ್ನು ಪಡೆದು ಬಂದ ಶ್ರೀಕಂಠೇಶಗೌಡರು ಬೆಂಗಳೂರಿನ ಪ್ರಸಿದ್ಧ ವಕೀಲರೊಬ್ಬರಲ್ಲಿ ಕೆಲವು ಕಾಲ ಕಿರಿಯ ವಕೀಲರಾಗಿ ಕೆಲಸ ಮಾಡಿದರು. ಆನಂತರ 1885ರಲ್ಲಿ ಮೈಸೂರಿಗೆ ತೆರಳಿ ಸ್ವತಂತ್ರವಾಗಿ ವಕೀಲಿ ವೃತ್ತಿಯನ್ನು ಆರಂಭಿಸಿದರು. ಅನಂತರ ನ್ಯಾಯಾಧೀಶರಾಗಿ ಹಾಸನ, ಹೊಳೆನರಸೀಪುರ, ಶಿವಮೊಗ್ಗ, ನಂಜನಗೂಡು, ಬೆಂಗಳೂರು, ಕೋಲಾರ, ಮಧುಗಿರಿ ಮುಂತಾದ ಸ್ಥಳಗಳಲ್ಲಿ ಕಾರ್ಯನಿರ್ವಹಿಸಿದರು.

ಶ್ರೀಕಂಠೇಶಗೌಡರು ಒಂದು ಮೊಕದ್ದಮೆಯ ಮೇಲೆ ತೀರ್ಪು ನೀಡಿದರೆಂದರೆ ಅದರ ಮೇಲೆ ಅಪೀಲು ಹೋಗಲೂ ಸಾಧ್ಯವಾಗುತ್ತಿರಲಿಲ್ಲವಂತೆ. ಹಣ ಮತ್ತು ಶಿಫಾರಸ್ಸುಗಳು ಅವರ ಹತ್ತಿರ ಸುಳಿಯುವಂತಿರಲಿಲ್ಲ. ಇದರಿಂದಾಗಿ ಕೆಲವು ಜನ ಮಧ್ಯವರ್ತಿಗಳಿಗೆ ಬರುತ್ತಿದ್ದ ಆದಾಯ ನಿಂತು ಹೋಗಿತ್ತು, ಆಗ ಶ್ರೀಕಂಠೇಶಗೌಡರ ಮೇಲೆ ಸೇಡು ತೀರಿಸಿಕೊಳ್ಳಲು ದಾರಿ ಹುಡುಕುತ್ತಿದ್ದರು.

"ಶ್ರೀಕಂಠೇಶಗೌಡರಲ್ಲಿ ಒಂದು ಅಭ್ಯಾಸವಿತ್ತು. ತಾವು ತೆಗೆದುಕೊಂಡ ಎಲ್ಲಾ ಮೊಕದ್ದಮೆಗಳ ತೀರ್ಪುಗಳನ್ನು ಒಮ್ಮೆಗೆ ಕುಳಿತು ಬರೆದುಬಿಡುತ್ತಿದ್ದರು. ಹೀಗಾಗಿ ನಂಜನಗೂಡಿನ ಕೋರ್ಟಿನಲ್ಲಿ ಹತ್ತೊಂಬತ್ತು ಮೊಕದ್ದಮೆಗಳ ತೀರ್ಪು ಬರೆಯಬೇಕಾಗಿತ್ತು. ಅವರ ಮೇಲೆ ಮೇಲಧಿಕಾರಿಗಳಿಗೆ ದೂರು ಹೇಳಲು ಕಾಯುತ್ತಿದ್ದವರಿಗೆ ಇದೊಂದು ಒಳ್ಳೆಯ ಅವಕಾಶವಾಯಿತು. ನ್ಯಾಯಾಧೀಶರು ಸದಾ ನಾಟಕ ಸಂಗೀತದಲ್ಲಿ ತಲ್ಲೀನರಾಗಿದ್ದಾರೆ. ಕೋರ್ಟಿನ ಕೆಲಸಗಳು ಸರಿಯಾಗಿ ನಡೆಯುತ್ತಿಲ್ಲ"[5]. ಹತ್ತೊಂಬತ್ತು ತೀರ್ಪುಗಳು ಬರೆಯದೆ ಹಾಗೆ ಕುಳಿತಿವೆ ಎಂಬುದಾಗಿ ಮುಖ್ಯ ನ್ಯಾಯಾಧೀಶ ಮಿಲ್ಲರ್

ಅವರಿಗೆ ದೂರು ಹೋಯಿತು. ಮಿಲ್ಲರ್ ಅನಿರೀಕ್ಷಿತ ಭೇಟಿಗೆ ನಿರ್ಧರಿಸಿದರು. ಶ್ರೀಕಂಠೇಶಗೌಡರ ಮಿತ್ರರೊಬ್ಬರಿಗೆ ಮಿಲ್ಲರ್ ಅವರ ಅನಿರೀಕ್ಷಿತ ಭೇಟಿಯ ವಿಷಯ ತಿಳಿಯಿತು. ಕೂಡಲೆ ಅವರಿಗೆ ಈ ವಿಷಯವನ್ನು ತಂತಿಯ ಮೂಲಕ ತಿಳಿಸಿದರು. ತಮ್ಮ ಬೆನ್ನಹಿಂದೆ ನಡೆದಿದ್ದ ವಿಚಾರ ಶ್ರೀಕಂಠೇಶಗೌಡರಿಗೆ ಆಶ್ಚರ್ಯವನ್ನುಂಟುಮಾಡಿತು. ಆಗ ರಾತ್ರಿ ಏಳು ಗಂಟೆಗೆ ಊಟ ಮಾಡಿ ಶ್ರೀಕಂಠೇಶಗೌಡರು ಕೆಲವು ಮೇಣದ ಬತ್ತಿಗಳನ್ನು ತೆಗೆದುಕೊಂಡು ನ್ಯಾಯಾಲಯದಲ್ಲಿ ತಮ್ಮ ಕೊಠಡಿಯಲ್ಲಿ ಹೋಗಿ ಕುಳಿತರು. ಬೆಳಗಿನ ಜಾವ ಐದು ಗಂಟೆಯ ಹೊತ್ತಿಗೆ ಆ ಹತ್ತೊಂಬತ್ತು ತೀರ್ಪುಗಳನ್ನು ಬರೆದು ಸೇವಕನನ್ನು ಏಳಿಸಿ ಮನೆಗೆ ಬಂದರು.

ಹಿಂದಿನ ದಿನ ಬೆಂಗಳೂರಿನಿಂದ ಹೊರಟಿದ್ದ ಮುಖ್ಯ ನ್ಯಾಯಾಧೀಶರು ಹನ್ನೊಂದು ಗಂಟೆಯ ಹೊತ್ತಿಗೆ ನಂಜನಗೂಡನ್ನು ತಲುಪಿದರು. ಶ್ರೀಕಂಠೇಶಗೌಡರು ಎಂದಿನಂತೆ ಹನ್ನೊಂದು ಗಂಟೆಗೆ ನ್ಯಾಯಾಲಯಕ್ಕೆ ಬಂದರು. ಅವರ ವಿರೋಧಿಗಳು 'ಇನ್ನೇನು ಇವರ ಕಥೆ ಮುಗಿಯಿತು' ಎಂದುಕೊಂಡರು. ಮುಖ್ಯ ನ್ಯಾಯಾಧೀಶರು ಎಲ್ಲವನ್ನು ಪರಿಶೀಲಿಸಿದರು ಎಲ್ಲವೂ ಸರಿಯಾಗಿದೆ. ಯಾರು ಈ ದೂರು ಕೊಟ್ಟವರು? ಎಂದರು. ಅದಕ್ಕೆ ಶ್ರೀಕಂಠೇಶಗೌಡರು ಯಾರೋ ತಿಳಿಯದೆ ಮಾಡಿದ್ದಾರೆ ಹೋಗಲಿ ಬಿಡಿ ಎಂದರು. ಮುಖ್ಯ ನ್ಯಾಯಾಧೀಶರು ಶ್ರೀಕಂಠೇಶಗೌಡರ ಬಗ್ಗೆ ಪ್ರಶಂಸೆಯ ಮಾತುಗಳನ್ನಾಡಿದರು.

### (ಉ) ವ್ಯಕ್ತಿತ್ವ

ಶ್ರೀಕಂಠೇಶಗೌಡರು ವೈಚಾರಿಕ ಮನೋಭಾವ ಉಳ್ಳವರಾಗಿದ್ದರೂ, ತಾತ ಲಿಂಗೇಗೌಡರ ಜೊತೆಯಲ್ಲಿ ಮನೆದೇವರು ಆದಿಚುಂಚನಗಿರಿಯ ಭೈರವನಿಗೆ ಪೂಜೆ ಸಲ್ಲಿಸುತ್ತಿದ್ದರು. ಮನೆಗೆ ನೆಂಟರಿಷ್ಟರು ಬಂದರೇ ಅವರೇ ವಿಶೇಷ ಆಡುಗೆ ಮಾಡುತ್ತಿದ್ದರು. ಚುಟ್ಟಾಸೇದುವ ಅಭ್ಯಾಸವಿತ್ತು. ಅಹಂಕಾರದ ಭಾವಗಳು ಇರಲಿಲ್ಲ.

ಶ್ರೀಕಂಠೇಶಗೌಡರು ವೃತ್ತಿಯಲ್ಲಿ ಪ್ರಾಮಾಣಿಕರೂ, ಕಾರ್ಯನಿರ್ವಹಣೆಯಲ್ಲಿ ದಕ್ಷರೂ ಆಗಿದ್ದರು. ಅವರ ಸ್ಮೃತಿಶಕ್ತಿ ಅದ್ಭುತವಾಗಿತ್ತು. ಇದಕ್ಕೆ ಒಂದು ನಿದರ್ಶನವನ್ನು ಕೊಡಬಹುದು. "ಶ್ರೀಕಂಠೇಶಗೌಡರು ಮಧುಗಿರಿಯಲ್ಲಿದ್ದಾಗ ಊರಿಗೆ ಪ್ಲೇಗು ಬಂದ ಪರಿಣಾಮ ಜನರೆಲ್ಲಾ ಊರಹೊರಗೆ ಶೆಡ್ಡುಹಾಕಿ ವಾಸಿಸತೊಡಗಿದರು. ನ್ಯಾಯಾಧೀಶರು ಮತ್ತು ನ್ಯಾಯಾಲಯವೂ ಊರ ಹೊರಗೆ ಶೆಡ್ಡಿನಲ್ಲಿ ಇರಬೇಕಾಗಿತ್ತು. ಆಗ ಕೊಲೆಯ ಮೊಕದ್ದಮೆ ನಡೆಯುತ್ತಿತ್ತು. ಅದರಲ್ಲಿ ಭಾಗಿಯಾಗಿದ್ದ ಹಣವಂತನೊಬ್ಬ ಶ್ರೀಕಂಠೇಶಗೌಡರನ್ನು ಒಲಿಸಿಕೊಳ್ಳಲು ಪ್ರಯತ್ನಿಸಿ ವಿಫಲನಾಗಿದ್ದ"[6]. ಈ ಕೊಲೆಯ ಮೊಕದ್ದಮೆಗೆ ಸಂಬಂಧಿಸಿದ ಕಾಗದ ಪತ್ರಗಳೆಲ್ಲವನ್ನು ಶ್ರೀಕಂಠೇಶಗೌಡರು ತಮ್ಮ ಗುಡಿಸಿಲಿನಲ್ಲಿ ಇಟ್ಟುಕೊಂಡಿದ್ದರು. ಒಂದು ರಾತ್ರಿ ಅವರ ಗುಡಿಸಿಲಿಗೆ ಆ ಹಣವಂತನ ಕಡೆಯವರು ಬೆಂಕಿಹಾಕಿ, ಎಲ್ಲಾ ಕಾಗದ ಪತ್ರಗಳನ್ನು

ಸುಟ್ಟು ಹಾಕಿದರು. ನ್ಯಾಯಾಧೀಶರು ಲಂಚಪಡೆದು ತಮ್ಮ ಗುಡಿಸಿಲಿಗೆ ಬೆಂಕಿಹಾಕಿ ಕಾಗದ ಪತ್ರಗಳನ್ನು ಸುಟ್ಟುಹಾಕಿದ್ದಾರೆಂದು ಸರ್ಕಾರಕ್ಕೆ ದೂರು ಹೋಯಿತು. ಶ್ರೀಕಂಠೇಶಗೌಡರು ಹೆದರಲಿಲ್ಲ, ತಮ್ಮ ಅಸಾಧಾರಣ ನೆನಪಿನಿಂದ ಎಲ್ಲವನ್ನು ಮೊದಲಿನಂತೆಯೇ ಬರೆದಿಟ್ಟರು. ಈ ಘಟನೆಯ ಬಗ್ಗೆ ಸರ್ಕಾರಕ್ಕೆ ವರದಿ ಕಳುಹಿಸಿದರು. ತಪ್ಪಿತಸ್ಥರಿಗೆ ಶಿಕ್ಷೆಯಾಯಿತು.

ಶ್ರೀಕಂಠೇಶಗೌಡರಿಗೆ ಕೆಲಸದ ಬಗ್ಗೆ ಗೌರವದ ಭಾವನೆಯಿತ್ತು. ಕೆಲಸಕ್ಕಾಗಿ ಬೇರೆಯವರನ್ನು ಗೋಗರೆದವರಲ್ಲ. ಒಮ್ಮೆ ಅವರು ಕೋಲಾರದಲ್ಲಿದ್ದಾಗ ಗಣಪತಿಯ ಉತ್ಸವಕ್ಕಾಗಿ ಮಂಟಪ ಕಟ್ಟಬೇಕಾಗಿದ್ದವನು ಬರಲಿಲ್ಲ. ತಾವೇ ಹಗಲುರಾತ್ರಿ ಶ್ರಮವಹಿಸಿ ಕಲಾತ್ಮಕವಾದ ಮಂಟಪವೊಂದನ್ನು ತಯಾರಿಸಿದರು. ಗಣಪತಿ ವಿಸರ್ಜನೆಯ ಬಳಿಕ ತಮ್ಮ ಮನೆಯಲ್ಲಿಯೇ ಮಂಟಪವನ್ನಿರಿಸಿಕೊಂಡರು. ನಂತರ ಇವರ ಮನೆಗೆ ಬಂದ ಮುಸಲ್ಮಾನ ಹಿರಿಯರೊಬ್ಬರು ಅದನ್ನು ಕೇಳಿದರು. ಗೌಡರು ಸಂತೋಷದಿಂದ ತೆಗೆದುಕೊಂಡು ಹೋಗಿ ಎಂದರು. ಅನೇಕರು ಇದನ್ನು ಟೀಕಿಸಿದರು. ಗೌಡರು ದೇವರಿಗೆ ಜಾತಿ ಮತಗಳಿಲ್ಲ ಎಂದು ಹೇಳಿದರು. ಅವರು ಮನೆಯಲ್ಲಿ ಅಡುಗೆ ಮಾಡಲು ಬ್ರಾಹ್ಮಣನೊಬ್ಬನನ್ನು ನೇಮಿಸಿಕೊಂಡಿದ್ದರು. ಮನೆಗೆಲಸಕ್ಕಾಗಿ ಹರಿಜನ, ಟೀ ತಂದುಕೊಡಲು ಮುಸಲ್ಮಾನನನ್ನು ತಮ್ಮ ಮನೆಯಲ್ಲಿರಿಸಿಕೊಂಡಿದ್ದರು. ಇದು ಅವರ ಸರ್ವಧರ್ಮ ಸಮನ್ವಯವನ್ನು ಸಾರುತ್ತದೆ.

ಶ್ರೀಕಂಠೇಶಗೌಡರ ಕೃತಿಗಳಲ್ಲಿ ಹಾಸ್ಯದ ಲೇಪನವಿದ್ದರೂ ತುಸು ಮುಂಗೋಪಿ, ಕಟುಭಾಷೆಯವರಾಗಿದ್ದರೆಂದು ಡಿ.ವಿ.ಜಿ. 'ಸಾಹಿತ್ಯೋಪಾಸಕರು' ಕೃತಿಯಲ್ಲಿ ತಿಳಿಸಿದ್ದಾರೆ. ಆದರೆ ಶ್ರೀಕಂಠೇಶಗೌಡರ ಕೃತಿಗಳನ್ನು ಅಭ್ಯಾಸಮಾಡಿದ ಡಿ.ವಿ.ಜಿ ಯವರಿಗೆ ಲೇಖಕರ ಬಗ್ಗೆ ಅಭಿಮಾನ ಮೂಡುತ್ತದೆ. ಕಂದುಬಣ್ಣದ , ಎತ್ತರದ ನಿಲುವಿನ ಗೌಡರನ್ನು ನೋಡಿದವರು ಹತ್ತಿರ ಬರಲು ಅಂಜುತಿದ್ದರೆಂಬ ಅಭಿಪ್ರಾಯವಿದೆ. ಅವರು ಸ್ವಭಾವತಃ ಮಿತಭಾಷಿಯಾಗಿದ್ದರು. ಸ್ತ್ರೀಯರ ಬಗ್ಗೆ ವಿಶೇಷ ಕಾಳಜಿಯಿತ್ತು. ಮಹಿಳಾ ಶಿಕ್ಷಣದ ಬಗ್ಗೆ ಒತ್ತು ನೀಡುತ್ತಿದ್ದರು. ಭಾನುವಾರ ಬಂದರೆ ತಮ್ಮ ಬಸವನಗುಡಿಯ ಮನೆಯಲ್ಲಿ ಓದುತ್ತಿದ್ದ ತನ್ನ ಅಣ್ಣತಮ್ಮಂದಿರ ಮಕ್ಕಳಿಗೆ ಒಂದೊಂದು ರೂಪಾಯಿ ಖರ್ಚಿಗೆ ಕೊಡುತ್ತಿದ್ದರು.

**(ಊ) ಕನ್ನಡ ಪ್ರೀತಿ**

"ಶ್ರೀಕಂಠೇಶಗೌಡರ ಕಾಲದಲ್ಲಿ ಮೈಸೂರಿನ ವಾತಾವರಣದಲ್ಲಿ ಕನ್ನಡಕ್ಕೆ ಪ್ರೋತ್ಸಾಹವೇ ಇರಲಿಲ್ಲ. ಅಂದು ರಾಜ್ಯವು ಮಹಾರಾಜರ ಕೈತಪ್ಪಿ ರೆಸಿಡೆಂಟರ ಕೈಗೆ ಹೋಗಿದ್ದ ಸಮಯ. ಆಂಗ್ಲರ ಪ್ರತ್ಯಕ್ಷ ಆಳ್ವಿಕೆಯಲ್ಲಿದ್ದುದರಿಂದ ಸ್ವಾಭಾವಿಕವಾಗಿ ದೇಶ ಭಾಷೆಗಳು ತಿರಸ್ಕಾರಕ್ಕೆ ಈಡಾಗಿದ್ದವು. ಇಂಗ್ಲಿಷ್ ಭಾಷೆಯ ಲಾಭವನ್ನು ಕನ್ನಡಿಗರಿಗಾಗಿ

ಒದಗಿಸಿಕೊಡಬೇಕೆಂದು ಶ್ರೀಕಂಠೇಶಗೌಡರು ಆಶಿಸಿದರು. ಅವರಿಗೆ ಮಾತೃಭಾಷೆಯ ಸೊಬಗು, ಶಕ್ತಿಯ ಅರಿವು ಚೆನ್ನಾಗಿತ್ತು. ಹಳ್ಳಿಗಳಲ್ಲಿ ಅವಿದ್ಯಾವಂತರೇ ಹೆಚ್ಚು ಇರುವ ಈ ದೇಶದಲ್ಲಿ ಅವರಿಗೆ ತಿಳಿಯುವ ಭಾಷೆಯಲ್ಲಿಯೇ ಶಿಕ್ಷಣ, ಆಡಳಿತ ಎಲ್ಲವೂ ನಡೆಯಬೇಕೆಂಬುದು ಶ್ರೀಕಂಠೇಶಗೌಡರ ದೃಢವಾದ ಮತ. ಶ್ರೀಕಂಠೇಶಗೌಡರು "ನಮಗೆ ಕನ್ನಡದಿಂದಲೇ ಮುಕ್ತಿ" ಎಂದು ಘೋಷಿಸಿದರು. ಹಲವರು "ಸೋಜಿಗವೆ ಗೌಡ ಕಬ್ಬವ ಪೇಳೆ! ಎಂದರು. ಆದರೆ ಗೌಡರು" ಕರ್ನಾಟಕದೊಳ್ ವಾಣಿಯೆ ರಾಣಿಯು ಸೋಜಿಗವೆ ಕಬ್ಬವ ಪೇಳೆ ಗೌಡಂ? ಎಂದು ಉತ್ತರಿಸಿದರು. ಕರ್ನಾಟಕದಲ್ಲಿ ಕನ್ನಡ ಸರಸ್ವತಿಯು ರಾಣಿಯಾಗಿರುವಾಗ ಒಬ್ಬ ಗೌಡನೂ ಕಾವ್ಯ ಬರೆಯಬಲ್ಲ ಎಂದರು.

ಜಿ.ಟಿ.ಎ. (ಗ್ರಾಜುಯೇಟ್ ಟ್ರೇಡಿಂಗ್ ಅಸೋಸಿಯೇಟ್ಸ್) ಎಂಬ ಕನ್ನಡ ಪ್ರಕಾಶನ ಸಂಸ್ಥೆಯೊಂದನ್ನು ಹುಟ್ಟುಹಾಕಿದ ಗೌಡರು ಅದರ ಮೂಲಕ ಹತ್ತಾರು ಕನ್ನಡ ಪುಸ್ತಕಗಳನ್ನು ಪ್ರಕಟಿಸಲು ಅನುವಾದರು. ಇಂಗ್ಲಿಷ್‌ನಿಂದ ಕನ್ನಡಕ್ಕೆ ನಾಟಕ, ಕಾದಂಬರಿ, ಜೀವನ ಚರಿತ್ರೆಗಳನ್ನು ಅನುವಾದಿಸಿದರು. ಕನ್ನಡದಲ್ಲಿ ಯಾವ ಭಾಷೆಯ ಯಾವ ವಿಷಯವನ್ನು ಬೇಕಾದರೂ ಹೇಳಬಹುದು ಎಂಬುದನ್ನು ತೋರಿಸಿಕೊಟ್ಟರು. ತಮ್ಮ ಮಕ್ಕಳಿಗೆ ಕನ್ನಡ ಮಾಧ್ಯಮದಲ್ಲಿ ಶಿಕ್ಷಣ ಕೊಡಿಸಿದರು. ಮಕ್ಕಳ ಇಂಗ್ಲಿಷ್ ಪಠ್ಯಪುಸ್ತಕಗಳನ್ನು ಕನ್ನಡಕ್ಕೆ ಭಾಷಾಂತರಿಸಿ ಹೇಳುತ್ತಿದ್ದರು. ತಮ್ಮ ಕಿರಿಯ ಮಗಳು ಶಾರದೆಗಾಗಿ ಭೂಗೋಳವನ್ನೇ ಬರೆದರು. ಅದಕ್ಕೆ ಶಾರದ ಭೂಗೋಳ ಎಂಬ ಹೆಸರಿಟ್ಟರು. ಸುರಭಿ ಮತ್ತು ವಿದ್ಯಾದಾಯಿನಿ ಪತ್ರಿಕೆಗಳಲ್ಲಿ ಮಕ್ಕಳಿಗೆ ಸುಲಭವಾಗಿ ಅರ್ಥವಾಗುವಂತೆ ಪಾಠಗಳನ್ನು ಬರೆಯಿಸಿ ಮುದ್ರಿಸಿದರು.

"ಶ್ರೀಕಂಠೇಶಗೌಡರು ನ್ಯಾಯಾಧೀಶರಾದ ಕೂಡಲೆ ಮೊಕದ್ದಮೆಗಳನ್ನು ಕನ್ನಡದಲ್ಲಿ ನಡೆಯಿಸಿದರು. ಮೊಟ್ಟಮೊದಲು ಕನ್ನಡದಲ್ಲಿ ತೀರ್ಪನ್ನು ಬರೆದ ಕೀರ್ತಿ ಇವರದ್ದು. ಅವರು ಬರೆದ ತೀರ್ಪುಗಳೆಲ್ಲ ಕನ್ನಡದಲ್ಲಿವೆ"[7]. ಅವರು ಹಾಸನದಲ್ಲಿದ್ದಾಗ ಬರೆದ ಕನ್ನಡ ತೀರ್ಪುಗಳ ಪ್ರತಿಗಳು ದೊರೆಯುತ್ತವೆ. ಅವರ ಪತ್ರ ವ್ಯವಹಾರವೆಲ್ಲ ಕನ್ನಡದಲ್ಲಿಯೇ ಇರುವುದನ್ನು ಕಾಣಬಹುದು. "ನಾನು ಎಷ್ಟೇ ಚೆನ್ನಾಗಿ ಇಂಗ್ಲಿಷ್‌ನಲ್ಲಿ ಬರೆದರೂ ಷೇಕ್ಸ್‌ಪಿಯರ್‌ನನ್ನು ಮೀರಿಸಲಾರೆ. ಷೇಕ್ಸ್‌ಪಿಯರ್ ಏನೇ ಮಾಡಿದರೂ ಕನ್ನಡದಲ್ಲಿ ನನ್ನ ಹಾಗೆ ಬರೆಯಲಾರ" ಎಂದು ಶ್ರೀಕಂಠೇಶಗೌಡರು ಕನ್ನಡ ವಿರೋಧಿಸುವವರಿಗೆ ಹೇಳಿ ಬಾಯಿ ಮುಚ್ಚಿಸುತ್ತಿದ್ದರು.

ಗೌಡರಿಗೆ ಕನ್ನಡ ನಾಡು ನುಡಿಗಳ ಬಗೆಗಿದ್ದ ಅಭಿಮಾನ ಕೃತಿರಚನೆಗೆ ಪ್ರೇರಣೆ ನೀಡಿತು. ಕನ್ನಡದಲ್ಲಿದ್ದ ಶಬ್ದ ಪ್ರಯೋಗ ಚಾತುರ್ಯ, ವಾಕ್ಯಬಂಧ, ಕಾವ್ಯದ ಶಿಲ್ಪಬಂಧ, ಲಕ್ಷಣ, ಅಲಂಕಾರ, ಕವಿತಾ ಚಮತ್ಕಾರಗಳನ್ನು ಇತರ ಭಾಷೆಗಳಿಂದ ಸ್ವೀಕರಿಸಿ ಕನ್ನಡವನ್ನು ರಸವತ್ತಾಗಿ ಮಾಡಬೇಕೆಂಬ ಅಭಿಲಾಷೆ ಮೂಡಿತು. ಇಂಗ್ಲಿಷ್ ಸಾಹಿತ್ಯದಲ್ಲಿರುವ ಉತ್ತಮ ಕೃತಿಗಳು ಕನ್ನಡಕ್ಕೂ ಬರಬೇಕೆಂಬ ತೀವ್ರ ಹಂಬಲದಲ್ಲಿ ಇವರ ಕೃತಿಗಳು ಸಾಕಾರಗೊಂಡವು.

**(ಋ) ಸಾಹಿತ್ಯಾಧ್ಯಯನ–ಸಾಹಿತ್ಯ ಸೇವೆ**

ಸಾಹಿತ್ಯದ ಪ್ರವೃತ್ತಿಯ ಶ್ರೀಕಂಠೇಶಗೌಡರು ಏನಾದರೊಂದು ಸಾಹಿತ್ಯ ಚಟುವಟಿಕೆಗಳನ್ನು ಆರಂಭಿಸಲು ಯೋಚಿಸುತ್ತಿದ್ದರು. ಮೈಸೂರಿಗೆ ವಕೀಲರಾಗಿ ಬಂದ ನಂತರ ಜಯರಾವ್, ಆನಂದರಾವ್ ಮುಂತಾದ ಕೆಲವು ಮಂದಿ ಸಾಹಿತ್ಯಪ್ರಿಯ ಪದವೀಧರರ ಪರಿಚಯವಾಗಿತ್ತು. ಶ್ರೀಕಂಠೇಶಗೌಡರು ಅವರನ್ನೆಲ್ಲಾ ಕೂಡಿಕೊಂಡು ಕನ್ನಡ ಪ್ರಕಾಶನ ಸಂಸ್ಥೆಯೊಂದನ್ನು ತೆರೆಯಲು ನಿರ್ಧರಿಸಿದರು. ಗ್ರಾಜುಯೇಟ್ಸ್ ಟ್ರೇಡಿಂಗ್ ಅಸೋಸಿಯೇಷನ್ (G.T.A) ಎಂಬ ಪ್ರಕಾಶನ ಸಂಸ್ಥೆಯನ್ನು ಸ್ಥಾಪಿಸಿದರು. ಇಂಗ್ಲಿಷ್ ಗ್ರಂಥಗಳನ್ನು ಕನ್ನಡಕ್ಕೆ ಭಾಷಾಂತರ ಮಾಡಿಸಿ ಮುದ್ರಿಸುವುದು ಈ ಸಂಸ್ಥೆಯ ಮಹತ್ವದ ಗುರಿ. ಈ ಸಂಸ್ಥೆಯಿಂದಲೇ 'ವಿದ್ಯಾದಾಯಿನಿ' ಎಂಬ ಪತ್ರಿಕೆಯೂ ಆರಂಭವಾಯಿತು. ತಮ್ಮ ವಕೀಲಿ ವೃತ್ತಿಯಿಂದ ಬರುತ್ತಿದ್ದ ಬಹುಪಾಲು ಹಣವನ್ನು ಶ್ರೀಕಂಠೇಶಗೌಡರು ಈ ಸಂಸ್ಥೆಗೆ ಹಾಕಿದ್ದರು. ಆ ಕಾಲದಲ್ಲಿ ಇಂಗ್ಲಿಷ್ ಪುಸ್ತಕಗಳನ್ನು ಓದುವುದು, ಇಂಗ್ಲಿಷ್‌ನಲ್ಲಿ ಮಾತನಾಡುವುದಕ್ಕೆ ದೊಡ್ಡಸ್ತಿಕೆ ಎಂದು ಜನ ತಿಳಿದಿದ್ದರು. ಇಂಥ ಕಾಲದಲ್ಲಿ ಶ್ರೀಕಂಠೇಶಗೌಡರು ಮತ್ತು ಅವರ ಮಿತ್ರರು ಕನ್ನಡದ ಮೇಲೆ ತಳೆದ ಅಭಿಮಾನವು ದೊಡ್ಡದು.

"ಮೈಸೂರಿಗೆ ಬಂದು ಸೇರಿದ ಮೇಲೆ ಸಾಹಿತಿಗಳ ದೊಡ್ಡ ಬಳಗವನ್ನೇ ಕಟ್ಟಿಕೊಂಡರು. ಅಭಿನವ ಕಾಳಿದಾಸರೆಂದು ಪ್ರಖ್ಯಾತರಾಗಿದ್ದ ಬಸವಪ್ಪಶಾಸ್ತ್ರಿಗಳು. ಪಂಡಿತ ಕರಿಬಸವಶಾಸ್ತ್ರಿಗಳು, ದೇವೋತ್ತಮ ಜೋಯಿಸರು ಮುಂತಾದ ಹಿರಿಯರ ಪರಿಚಯವಾಯಿತು. ಕನ್ನಡದ ಶ್ರೇಷ್ಠ ನಟರಾದ ವರದಾಚಾರ್ಯ, ಮಹಮದ್ ಪೀರ್ ಮುಂತಾದವರೆಲ್ಲ ಶ್ರೀಕಂಠೇಶಗೌಡರಲ್ಲಿಗೆ ಬಂದು ಹೋಗುತ್ತಿದ್ದರು".[8]

ಮೊದಲಿನಿಂದಲೂ ಗೌಡರಲ್ಲಿ ಸಾಹಿತ್ಯಾಸಕ್ತಿ ಬೆಳೆಯುತ್ತ ಬಂದಿತ್ತು. ಜನಪದ ಕಲೆ ಮತ್ತು ಸಾಹಿತ್ಯಗಳು ಅವರ ಮೇಲೆ ತುಂಬಾ ಪ್ರಭಾವ ಬೀರಿದ್ದವು. ಶ್ರೀಕಂಠೇಶಗೌಡರ ಮೇಲೆ ಹೆಚ್ಚು ಪ್ರಭಾವ ಬೀರಿದ್ದ ಛಂದೋರೂಪಗಳೆಂದರೆ ಕಂದ, ವೃತ್ತಗಳು. ಗ್ರಾಜುಯೇಟ್ಸ್ ಟ್ರೇಡಿಂಗ್ ಅಸೋಸಿಯೇಷನ್ ಮೂಲಕ ಗೌಡರು ಆರಂಭಿಸಿದ್ದ ವಿದ್ಯಾದಾಯಿನಿ ಪತ್ರಿಕೆಯಲ್ಲಿ ಅವರ ಮೊದಮೊದಲಿನ ಬರಹಗಳು ಅಚ್ಚಾಗುತ್ತಿದ್ದವು. ನಾಟಕ ಸಾಹಿತ್ಯದ ಬಗೆಗೆ ಶ್ರೀಕಂಠೇಶಗೌಡರಿಗೆ ಅಪಾರವಾದ ಒಲವಿತ್ತು. ಇಂಗ್ಲಿಷ್ ಸಾಹಿತ್ಯವನ್ನು ಚೆನ್ನಾಗಿ ಓದಿಕೊಂಡಿದ್ದ ಅವರು ಷೇಕ್ಸ್‌ಪಿಯರ್‌ನ ನಾಟಕಗಳನ್ನು ಕನ್ನಡಕ್ಕೆ ತರಲು ಬಯಸಿದರು. ತಮ್ಮ ಬಿಡುವಿಲ್ಲದ ವಕೀಲಿ ವೃತ್ತಿ ವೇಳೆಯಲ್ಲಿಯೂ ಶ್ರೀಕಂಠೇಶಗೌಡರು ಷೇಕ್ಸ್‌ಪಿಯರ್‌ನ ನಾಟಕಗಳ ಅನುವಾದಕ್ಕೆ ಕೈಹಾಕಿದರು. ಕನ್ನಡಕ್ಕೆ ಮರೆಯಲಾಗದ ಕೊಡುಗೆಗಳನ್ನು ಇತ್ತರು.

## II. ಶ್ರೀಕಂಠೇಶಗೌಡರ ಕೃತಿಗಳು

ಬಹುಮುಖ ಪ್ರತಿಭೆಯುಳ್ಳ ಶ್ರೀಕಂಠೇಶಗೌಡರು ನಾಟಕಕಾರರಾಗಿ ಪ್ರಸಿದ್ಧರಾಗಿದ್ದರೂ, ಸಾಹಿತ್ಯದ ಅನೇಕ ಪ್ರಕಾರಗಳಲ್ಲಿ ಕೃಷಿ ಮಾಡಿದ್ದಾರೆ. ಕೃತಿಗಳೆಲ್ಲಾ ಲಭ್ಯವಿಲ್ಲದಿದ್ದರೂ, ಲಭ್ಯವಿರುವ ಕೃತಿಗಳೇ ಅವರ ಪ್ರತಿಭೆಯನ್ನು ಸಾರಲು ನಿದರ್ಶನಗಳಾಗಿವೆ.

ಹೊಸಗನ್ನಡ ಸಾಹಿತ್ಯದ ಅರುಣೋದಯದ ಕಾಲದಲ್ಲಿ 20ನೇ ಶತಮಾನದ ಆರಂಭದಲ್ಲಿ ಕನ್ನಡದ ಪ್ರಸಿದ್ಧ ಸಾಹಿತಿಗಳಲ್ಲಿ ಶ್ರೀಕಂಠೇಶಗೌಡರು ಒಬ್ಬರಾಗಿದ್ದರು ಎಂಬುದು ನಿರ್ವಿವಾದ ಸಂಗತಿ. ಅವರು ರಚಿಸಿದ ಕೃತಿಗಳು ಆ ಮೂಲಕ ಕನ್ನಡಕ್ಕೆ ಸಲ್ಲಿಸಿದ ಸೇವೆಯನ್ನು ಹೀಗೆ ಗುರುತಿಸಬಹುದು.

### (ಅ) ನಾಟಕಗಳು

**1. ಪ್ರತಾಪರುದ್ರದೇವ**

ಶ್ರೀಕಂಠೇಶಗೌಡರು ಷೇಕ್ಸಪಿಯರ್‌ನ ದುರಂತನಾಟಕವಾದ ಮ್ಯಾಕ್ಬೆತ್‌ನ್ನು 'ಪ್ರತಾಪರುದ್ರದೇವ' ಎಂದು 1895 ರಲ್ಲಿ ರೂಪಾಂತರಿಸಿದ್ಧಾರೆ. ಕೃತಿ ವಿದೇಶೀ ನೆಲದ್ದಾದರೂ ಕನ್ನಡಕ್ಕೆ ಒಗ್ಗುವ ರೀತಿಯಲ್ಲಿ ಪರಿಚಯಿಸಿಕೊಟ್ಟಿದ್ದಾರೆ. ಚಂಪೂ ಶೈಲಿಯನ್ನು ಅಳವಡಿಸಿಕೊಂಡಿದ್ದರೂ, ಕನ್ನಡದ ಕೆಲವು ಛಂದಗಳನ್ನು, ಜನಪದ ಗಳನ್ನು, ಹಾಡುಗಳನ್ನು ಬಳಸಿಕೊಂಡಿದ್ದಾರೆ. ಪದ್ಯದ ಸಂಭಾಷಣೆಯ ದರ್ಶನ ಮಾಡಿಸಿದ್ದಾರೆ ಇದನ್ನು ಮುಂದಿನ ಅಧ್ಯಾಯದಲ್ಲಿ ವಿವರವಾಗಿ ಚರ್ಚಿಸಿದೆ.

**2. ಪ್ರಮೀಳಾರ್ಜುನೀಯ**

ಶ್ರೀಕಂಠೇಶಗೌಡರು ಷೇಕ್ಸ್‌ಪಿಯರ್‌ನ ಪ್ರಹಸನವಾದ ಎ ಮಿಡ್ ಸಮ್ಮರ್ ನೈಟ್ಸ್ ಡ್ರೀಮ್‌ನ್ನು 'ಪ್ರಮೀಳಾರ್ಜುನೀಯ' ಎಂದು ರೂಪಾಂತರಿಸಿದ್ದಾರೆ. ಮಲೆಯಾಳದ ರಾಣಿ ಪ್ರಮೀಳೆಯ ರಾಜ್ಯದಲ್ಲಿ ನಡೆಯುವ ಮೂರು ಪ್ರೇಮದ ಕಥಾವಸ್ತುವನ್ನು ಇದು ಒಳಗೊಂಡಿದೆ. ಸಂಸ್ಕೃತ ಛಂದೋರೂಪಗಳ ಜೊತೆಗೆ ಕನ್ನಡದ ಛಂದಸ್ಸುಗಳನ್ನು ಬಳಸಿಕೊಂಡಿದ್ದಾರೆ. ಹಲವು ವಿವಿಧ ಧಾಟಿಯ ಹಾಡುಗಳು ನಾಟಕಕ್ಕೆ ಮತ್ತಷ್ಟು ಮೆರಗು ನೀಡಿವೆ. ಆತಂಕದಲ್ಲಿ ಆರಂಭವಾದ ಕಥಾಹಂದರ ಕಡೆಗೆ ಸುಖಾಂತವಾಗುತ್ತದೆ.ಸ್ಥಳೀಯ ಕಲಾವಿದರ ಸಮಾಧಿ ಪರಿಣಯ ನಾಟಕದ ಕಲಿಕೆ–ಪ್ರದರ್ಶನ ಈ ನಾಟಕದ ಬೆಳವಣಿಗೆಗೆ ಹಾಸ್ಯದ ಲೇಪನ ಸೇರಿಸಿರುವುದು ಗಮನಾರ್ಹ. ಶ್ರೀಕಂಠೇಶಗೌಡರ ಸ್ವತಂತ್ರ ಪ್ರತಿಭೆ ಇಲ್ಲಿ ಗ್ರಾಮ್ಯ ಭಾಷೆಯ ಮೂಲಕವೂ ಪ್ರಕಟವಾಗಿದೆ. ಮುಂದಿನ ಅಧ್ಯಾಯಗಳಲ್ಲಿ ದೀರ್ಘವಾಗಿ ಚರ್ಚಿಸಲಾಗಿದೆ.

### 3. ಸೀತಾಸ್ವಯಂವರ

ಶ್ರೀಕಂಠೇಶಗೌಡರು ಸಂಸ್ಕೃತದ 'ಜಾನಕೀ ಪರಿಣಯ' ಎಂಬ ನಾಟಕವನ್ನು ಆಧರಿಸಿ ಸೀತಾಸ್ವಯಂವರವನ್ನು ರಚಿಸಿದ್ದಾರೆ. ಇದೊಂದು ಸ್ವತಂತ್ರ ನಾಟಕವಾಗಿ ಸಾಕಾರಗೊಂಡಿದೆ. ಈ ನಾಟಕದ ಹೊಸಗನ್ನಡ ಸಂಭಾಷಣಾ ಶೈಲಿಯಲ್ಲಿ ಗ್ರಾಮ್ಯದ ಸೊಗಡಿದೆ. ರಾವಣನು ಸೀತೆಯನ್ನು ವರಿಸಲು ಮಾಯಾರಾಮನ ವೇಷ ಧರಿಸುವ ಪ್ರಯತ್ನ, ಪರಶುರಾಮನನ್ನು ವಿಶ್ವಾಮಿತ್ರನ ಶಿಷ್ಯ ರಾಮನ ಮೇಲೆ ಎತ್ತಿಕಟ್ಟಿದ್ದು, ವಿರಥ ಮತ್ತು ಶೂರ್ಪನಖಿಯರ ಮೂಲಕ ಸೀತೆಯನ್ನು ಪಡೆಯುವ ಪ್ರಯತ್ನಗಳೆಲ್ಲವೂ ವಿಫಲವಾಗಿ, ರಾವಣ ಸೀತೆಯ ಕೊರಗಿನಲ್ಲಿಯೇ ಸಾಯುವುದು. ಪದ್ಯಸಂಭಾಷಣೆಗಳ ಮೂಲಕ ಅಭಿವ್ಯಕ್ತಗೊಳಿಸಿ ಇಲ್ಲಿ ಶ್ರೀಕಂಠೇಶಗೌಡರು ಇವೆಲ್ಲವನ್ನು ಪ್ರತಿಭೆಯಿಂದ ಮೆರೆಸಿದ್ದಾರೆ. ರಾಮಾಯಣದ ಸೀತಾ ಅಪಹರಣವು ಇಲ್ಲಿ ನಡೆಯುವುದಿಲ್ಲ. ರಾಮ–ರಾವಣರ ಯುದ್ಧವೂ ಇಲ್ಲಿ ನಡೆಯುವುದಿಲ್ಲ. ಹಲವು ರೀತಿಯಲ್ಲಿ ಕೃತಿ ಮಹತ್ವ ಪಡೆದಿದೆ ಈ ಬಗ್ಗೆ ಮುಂದಿನ ಅಧ್ಯಾಯದಲ್ಲಿ ದೀರ್ಘವಾಗಿ ಚರ್ಚಿಸಲಾಗಿದೆ.

## (ಅ) ಶ್ರೀಕಂಠೇಶಗೌಡರ ಇತರ ಕೃತಿಗಳು

ಶ್ರೀಕಂಠೇಶಗೌಡರು ನಾಟಕಕಾರರಾಗಿ ಸಿದ್ಧಹಸ್ತರಾಗಿದ್ದಂತೆ ಕನ್ನಡ ಸಾಹಿತ್ಯದ ಇತರ ಪ್ರಕಾರಗಳಲ್ಲೂ ಸಿದ್ಧಹಸ್ತರಾಗಿದ್ದರು. ಇಂಗ್ಲಿಷ್ ನಾಟಕಗಳನ್ನು ಕನ್ನಡಕ್ಕೆ ಅನುವಾದಿಸಿದಂತೆಯೇ ಇಂಗ್ಲಿಷಿನ ಕಾದಂಬರಿಗಳನ್ನು ಕನ್ನಡಕ್ಕೆ ಸೊಗಸಾಗಿ ಅನುವಾದಿಸಿದ್ದಾರೆ.

ಹೆನ್ರಿ ಟೈಲರಿನ 'ಸಿಸಿಲಿಯನ್ ಸಮ್ಮರ್' ಅನ್ನು ಕನ್ಯಾವಿತಂತು ಎಂಬ ಹೆಸರಿನಲ್ಲಿ ಮೇರಿಯಾ ಮಿಸ್‌ವರ್ಥಳ 'ದಿ ಲಿಟಲ್ ಮರ್ಚೆಂಟ್ಸ್' ಅನ್ನು ಚಿಕ್ಕ ಬಣಜಿಗರು ಎಂಬ ಹೆಸರಿನಲ್ಲಿ ಅನುವಾದಿಸಿದ್ದಾರೆ. ಡಫ್ ಎಂಬ ಇಂಗ್ಲಿಷ್ ಇತಿಹಾಸಕಾರ ಬರೆದ ಶಿವಾಜಿ ಕಥೆಯನ್ನು ಆಧಾರವಾಗಿಟ್ಟುಕೊಂಡು 'ಭವಾನಿ ಬಾಳು' ಎಂಬ ಕಾದಂಬರಿ ಬರೆದಿದ್ದಾರೆ. ಕನ್ನಡದ ಪ್ರಾರಂಭದ ಕಾದಂಬರಿ ಅನುವಾದಕರಲ್ಲಿ ವಿಶಿಷ್ಟಸ್ಥಾನ ಗಳಿಸಿದ್ದಾರೆ.

ಶ್ರೀಕಂಠೇಶಗೌಡರು ಕನ್ನಡದ ಶ್ರೇಷ್ಠ ಜೀವನ ಚರಿತ್ರಕಾರರಲ್ಲಿ ಒಬ್ಬರು. ಇವರು ಬರೆದ ಜೀವನಚರಿತ್ರೆಗಳಲ್ಲಿ ಶಾಲಿವಾಹನ ಚರಿತ್ರೆ, ವಾಲ್ಮೀಕಿ ಋಷಿಗಳ ಚರಿತ್ರೆ, ಕಿತ್ತೂರ ರಾಣಿ, ಮೆ.ಜೆ. ವ್ಯಾನ್‌ಸಾಮಿರನ್ ಮೊದಲಾದ ಜೀವನ ಚರಿತ್ರೆಗಳು ಜನಪ್ರಿಯವಾದವು.

ವಿದ್ಯಾದಾಯಿನಿ ಮತ್ತು ಇವರೇ ಪ್ರಾರಂಭಿಸಿದ ಸುರಭಿ ಪತ್ರಿಕೆಗಳಲ್ಲಿ ಅನೇಕ ಹಾಸ್ಯಬರಹಗಳನ್ನು ಪ್ರಬಂಧಗಳನ್ನು ಜಾನಪದ ಕಥೆಗಳನ್ನು ಬರೆದು ಪ್ರಕಟಿಸಿದ್ದಾರೆ.

ಪ್ರಬಂಧಗಳ ಪೈಕಿ ವಿಜಯದಶಮಿ, ಕಾಲಪರಿಮಾಣ, ವಿವಿಧ ವಾಹನ, ಸ್ಟಾಕ್ ಹೋಂ ಪ್ರಬಂಧಗಳು ಜಾನಪದ ಕಥೆಗಳ ಪೈಕಿ, ಪುಷ್ಪಮಂಜರಿಯಕಥೆ, ಭೂಲೋಕದ ಯಮ, ಬುದ್ಧಿವಂತರ ಕಥೆ, ಮೊದಲಾದವು ಆ ಕಾಲಕ್ಕೆ ಜನಪ್ರಸಿದ್ಧಿ ಹೊಂದಿದ್ದವು. ಹಾಸ್ಯಚಟಾಕಿಗಳನ್ನು, ಹಾಸ್ಯಬರಹಗಳನ್ನು ಬರೆಯುವುದರಲ್ಲೂ ಎತ್ತಿದ ಕೈ. ಆದರೂ ಇವರು ಹಾಸ್ಯಸಾಹಿತಿಗಳೆಂದು ಪ್ರಸಿದ್ಧರಾಗಲಿಲ್ಲ.

ಶ್ರೀಕಂಠೇಶಗೌಡರು ಪ್ರಸಿದ್ಧ ನಾಟಕಕಾರೂ, ನ್ಯಾಯಾಧೀಶರೂ ಆದಂತೆಯೇ ಪ್ರಸಿದ್ಧ ಹಳೆಗನ್ನಡ ಕವಿಗಳಾಗಿದ್ದರು. ತಮ್ಮ ಕಾಲದ ಬಸವಪ್ಪಶಾಸ್ತ್ರಿಗಳು ಕರಿಬಸವಶಾಸ್ತ್ರಿಗಳು ಮೊದಲಾದವರ ಸಾಲಿಗೆ ಸೇರುವ ಉತ್ಕೃಷ್ಟ ಕವಿಗಳಾಗಿದ್ದರು ಅವರು ಬರೆದ ಚಾಮನೃಪ ಚಂದ್ರಪ್ರಭೇ ಕಾವ್ಯ ಇದಕ್ಕೊಂದು ನಿದರ್ಶನ.

ಸಂಗೀತ ಮತ್ತು ಹಾಡುಗಳ ರಚನೆಯಲ್ಲಿ ಮತ್ತು ಕಂದ, ವೃತ್ತಗಳಲ್ಲಿ ಹಳಗನ್ನಡ ಪದ್ಯ ರಚನೆಯಲ್ಲಿ ಪ್ರಥಮದರ್ಜೆಕವಿಗಳಾಗಿದ್ದರು ಎಂಬುದಕ್ಕೆ ಇವರ ಮೂರು ನಾಟಕಗಳಲ್ಲಿನ ಪದ್ಯ-ಹಾಡುಗಳ ರಚನೆಗಳೇ ಸಾಕ್ಷಿಯಾಗಿವೆ.

20ನೇ ಶತಮಾನದ ಮೊದಲಿನ ಪ್ರಸಿದ್ಧ ಕನ್ನಡ ಸಾಹಿತಿಗಳಲ್ಲಿ ನಾಟಕಕಾರರಲ್ಲಿ ಅತಿ ಪ್ರಸಿದ್ಧರಲ್ಲಿ ಶ್ರೀಕಂಠೇಶಗೌಡರು ಒಬ್ಬರಾಗಿದ್ದರು ಎಂಬುದಕ್ಕೆ ಅವರ ವಿವಿಧ ಸಾಹಿತ್ಯ ಪ್ರಕಾರದ ಕೃತಿಗಳು ಸಾಕ್ಷಿಯಾಗಿವೆ

---

# ಅಧ್ಯಾಯ-5

# ಶ್ರೀಕಂಠೇಶಗೌಡರ 'ಪ್ರತಾಪರುದ್ರದೇವ'-ಒಂದು ವಿಶ್ಲೇಷಣೆ

## I ಷೇಕ್ಸ್‌ಪಿಯರನ 'ಮ್ಯಾಕ್ಬೆತ್' ನಾಟಕದ ಕಥಾಸಾರ

### 1ನೇ ಅಂಕ

ಸ್ಕಾಟ್ಲೆಂಡ್ ರಾಜ್ಯವನ್ನು ಡಂಕನ್ ಎಂಬ ವೃದ್ಧ ಆಳುತ್ತಿದ್ದನು. ಈತ ಸೌಮ್ಯ ಸ್ವಭಾವದವನಾಗಿದ್ದು, ಒಳ್ಳೆಯ ರಾಜನೆಂದು ಹೆಸರುಗಳಿಸಿದ್ದ. ಅವನ ಸೈನ್ಯದಲ್ಲಿ ಮ್ಯಾಕ್ಬೆತ್ ಮತ್ತು ಬ್ಯಾಂಕೋ ಇವರಿಬ್ಬರು ಪ್ರಸಿದ್ಧ ಸೇನಾಧಿಪತಿಗಳು. ಯುದ್ಧ ಮುಗಿಸಿ ಇವರಿಬ್ಬರು ನಿರ್ಜನ ಪ್ರದೇಶದಲ್ಲಿ ಬರುತ್ತಿದ್ದಾಗ ಮೂವರು ಮಾಟಗಾತಿಯರು ಎದುರುಗೊಳ್ಳುತ್ತಾರೆ. ಯಾರು ನೀವು? ಎಂದು ಮ್ಯಾಕ್ಬೆತ್ ಮತ್ತು ಬ್ಯಾಂಕೋ ಮಾಟಗಾತಿಯರನ್ನು ಪ್ರಶ್ನಿಸುತ್ತಾರೆ. ಮೊದಲನೆಯವಳು ಮ್ಯಾಕ್ಬೆತ್‌ಗೆ "ಜಯವಾಗಲಿ ಶ್ರೀಮಂತ ಜಮೀನ್ದಾರ" (ಗ್ಲಾಮ್ಸನತೇನ) ಎಂದು ನಮಸ್ಕರಿಸುತ್ತಾಳೆ. ಎರಡನೆಯವಳು "ಜಯವಾಗಲಿ ಕಾಡರನತೇನ" ಎಂದು ಸಂಬೋಧಿಸುತ್ತಾಳೆ. ಮೂರನೆಯವಳು "ಜಯವಾಗಲಿ ಈ ದೇಶದ ಮುಂದಿನ ರಾಜ" ಎಂದು ಹಾರೈಸುತ್ತಾಳೆ. ಈ ಮಾಟಗಾತಿಯರ ಭವಿಷ್ಯ ವಾಣಿಗಳು ಮ್ಯಾಕ್ಬೆತ್‌ನಲ್ಲಿ ಒಂದೆಡೆ ಆಶ್ಚರ್ಯಗೊಳಿಸುತ್ತವೆ. ಮತ್ತೊಂದಡೆ ಗಾಬರಿ ಹುಟ್ಟಿಸುತ್ತವೆ.

ತನ್ನ ಸ್ನೇಹಿತನ ಮನಃಸ್ಥಿತಿಯನ್ನು ಅರಿತ ಬ್ಯಾಂಕೋ ಆ ಮೂವರಿಂದ ತನ್ನ ವಿಷಯ ಕೇಳಿಕೊಳ್ಳುತ್ತಾನೆ. ನಂತರ ಮಾಟಗಾತಿಯರು ಮಬ್ಬುರಾತ್ರಿಯಲ್ಲಿ ಮಾಯವಾಗುತ್ತಾರೆ. ವಾಸ್ತವತೆಯ ಅರಿವಿದ್ದ ಬ್ಯಾಂಕೋನು ಮ್ಯಾಕ್ಬೆತ್‌ಗೆ ಕಲ್ಪನೆಯಲ್ಲಿ ವಿಹರಿಸಬೇಡ ಎಂದು ತಿಳಿಹೇಳುತ್ತಾನೆ. ಆದರೆ ಮ್ಯಾಕ್ಬೆತ್‌ನ ಕಿವಿಯಲ್ಲಿ ಮಾಟಗಾತಿಯರ ಮಾತುಗಳು ಗುಂಯ್‌ಗುಡುತ್ತಿದ್ದವು. ಮಾಟಗಾತಿಯರ ಮಾತುಗಳನ್ನು ಚರ್ಚಿಸುತ್ತಾ ಈ ಸೇನಾಪತಿಗಳು ರಾಜ ಡಂಕನ್‌ನ ಪಾಳಯದ ಕಡೆಗೆ ಪ್ರಯಾಣ ಬೆಳೆಸಿದರು. ರಾಸ್ ಬಂದು "ರಾಜ ನಿಮ್ಮನ್ನು ಕಾಡರಿನ ಡೀನ್ ಆಗಿ ನೇಮಿಸಿದ್ದಾನೆ" ಎಂದಾಗ ಮಾಟಗಾತಿಯರ ಭವಿಷ್ಯ ನಿಜವೆಂದು ನಂಬಿದ ಮ್ಯಾಕ್ಬೆತ್ ಮತ್ತಷ್ಟು ಆಸೆಯ ಅಲೆಯಲ್ಲಿ ತೇಲುತ್ತಾನೆ. ಆಗ ಬ್ಯಾಂಕೋ "ಮಿತ್ರ ಅವರ ಮಾತಿಗೆ ಮಹತ್ವ ಕೊಡಬೇಡ. ದುಷ್ಟಶಕ್ತಿಗಳು ನಮಗೆ ಆಮಿಷಗಳನ್ನೊಡ್ಡಿ ನಾಶ ಮಾಡುತ್ತವೆ." ಎಂದು ಎಚ್ಚರಿಸುತ್ತಾನೆ. ರಾಜ ಡಂಕನ್ ತನ್ನ ಸೇನಾಪತಿಗಳನ್ನು ಅತ್ಯಂತ ಪ್ರೀತಿಯಿಂದ ಸ್ವಾಗತಿಸಿ. ಗೌರವಿಸುತ್ತಾನೆ. ಮಾಲ್ಕಮ್‌ನನ್ನು ಯುವರಾಜನನ್ನಾಗಿ ನೇಮಿಸುತ್ತಾನೆ. ಈ ನಿರ್ಧಾರದಿಂದ ಬೇಸರಗೊಂಡ ಮ್ಯಾಕ್ಬೆತ್ ಅನ್ಯಾಯ, ಅಧರ್ಮ, ದುಷ್ಕೃತ್ಯಗಳಿಂದಲಾದರೂ ನಾನು ಸಿಂಹಾಸನವನ್ನೇರಲೇಬೇಕೆಂಬ ಆಲೋಚನೆ ಮಾಡುತ್ತಾನೆ.

## 2ನೇ ಅಂಕ

ಮ್ಯಾಕ್ಬೆತ್‌ನ ಹೆಂಡತಿ ಲೇಡಿ ಮ್ಯಾಕ್ಬೆತ್ ಶ್ರೀಮಂತೆಯಾಗಿದ್ದಳು. ಛಲಗಾತಿಯಾದ ಇವಳು ತನ್ನ ಗಂಡನ ಯಶಸ್ಸನ್ನು ಬಯಸುತ್ತಿದ್ದಳು. ರಾಜ ಡಂಕನ್ ತನಗೆ ಪದವಿಕೊಟ್ಟು ಗೌರವಸಿದ್ದಾನೆ. ಆದರೆ ನಾನು ರಾಜನಾಗುವ ಭರವಸೆ ಹೊಂದಿಲ್ಲವೆಂದು ಪತ್ರದ ಮೂಲಕ ಮ್ಯಾಕ್ಬೆತ್ ತಿಳಿಸುತ್ತಾನೆ. ಲೇಡಿ ಮ್ಯಾಕ್ಬೆತ್ ದುರಾಸೆಯವಳಾಗಿದ್ದು, ತನ್ನ ಪತಿಗೆ ರಾಜನಾಗಬೇಕೆಂಬ ಮಹತ್ವಾಕಾಂಕ್ಷೆಯಿದೆ ಎಂಬುದನ್ನು ಅರಿತಳು.

ರಾಜ ಡಂಕನ್ ತನ್ನ ಬಂಧು ಮ್ಯಾಕ್ಬೆತ್ ಮೇಲೆ ತನಗಿದ್ದ ಪ್ರೀತಿ ಮತ್ತು ಗೌರವದ ಸಂಕೇತವಾಗಿ ಒಂದು ರಾತ್ರಿ ಅವನ ಮನೆಗೆ ಅತಿಥಿಯಾಗಿ ಬರಲು ನಿರ್ಧರಿಸಿದ. ಈ ವಿಷಯ ತಿಳಿದ ಮ್ಯಾಕ್ಬೆತ್ ಸಂತೋಷಭರಿತನಾಗಿ ದೂತನೊಬ್ಬನ ಮೂಲಕ ಪತ್ನಿಗೆ ವಿಷಯ ಮುಟ್ಟಿಸಿದ. ಲೇಡಿ ಮ್ಯಾಕ್ಬೆತ್ ತನ್ನ ಅಂತರಂಗದಾಸೆ ಪೂರೈಸಿಕೊಳ್ಳಲು ಸುಸಂದರ್ಭ ಒದಗಿ ಬಂದಿದೆ ಎಂದು ಭಾವಿಸಿದಳು. ಈ ಅವಕಾಶವನ್ನು ಸದುಪಯೋಗ ಪಡಿಸಿಕೊಳ್ಳಲು ಕಾರ್ಯತತ್ಪರಳಾದಳು. ರಾಜನನ್ನು ಮುಗಿಸುವುದೇ ಸೂಕ್ತ ಎಂದು ಪತಿಗೆ ಮನವರಿಕೆ ಮಾಡಿಕೊಟ್ಟಳು. ಬಂಧುವಿನ ಹತ್ಯೆಯು ಮ್ಯಾಕ್ಬೆತ್‌ಗೆ ಸರಿಯೆನಿಸುವುದಿಲ್ಲ. ಆದರೆ ಲೇಡಿ ಮ್ಯಾಕ್ಬೆತ್ "ಗಂಡನನ್ನು ಪುಸಲಾಯಿಸಿ ಕೆರಳಿಸಿ ಅವನ 'ಗಂಡಸುತನ' ವನ್ನೇ ಅಪಹಾಸ್ಯ ಮಾಡಿ, ತನ್ನ ಯೋಜನಾಜಾಲದಲ್ಲಿ ಸಿಕ್ಕಿಸಿಕೊಂಡಳು"[1] ಲೇಡಿಮ್ಯಾಕ್ಬೆತ್ ಎಲ್ಲರನ್ನು ಉಪಚರಿಸಿದಳು. ರಾಜ ಡಂಕನ್‌ನಿಗೆ ಅತಿಥಿ ಸತ್ಕಾರದಿಂದ ಸಂತೋಷವಾಯಿತು. ಪ್ರಯಾಣದ ದಣಿವಿನಿಂದಾಗಿ ಅವನು ಬೇಗ ನಿದ್ದೆಗೆ ಜಾರಿದನು. ಅವನ ಅಕ್ಕಪಕ್ಕದಲ್ಲಿ ಇಬ್ಬರು ಅಂಗರಕ್ಷಕರು ಮಲಗಿದರು. ಆದರೆ ಲೇಡಿ ಮ್ಯಾಕ್ಬೆತ್ ಊಟದಲ್ಲಿ ಉಪಾಯದಿಂದ ಮದ್ಯಸೇವನೆ ಮಾಡಿಸಿದ್ದರಿಂದ ಅವರು ತಮ್ಮ ಕರ್ತವ್ಯ ಮರೆತರು.

ಮಧ್ಯರಾತ್ರಿ ಸಮೀಪಿಸುತ್ತಿದ್ದಂತೆ, ಲೇಡಿ ಮ್ಯಾಕ್ಬೆತ್ ಗಂಡನ ಬಳಿಗೆ ಬಂದು, ರಾತ್ರಿಯ ಒಂದು ಪುಟ್ಟಕಾರ್ಯದಿಂದ ಜೀವನ ಪೂರ್ತಿ ವೈಭವದಿಂದ ತೇಲಾಡಬಹುದೆಂದು ಮನವರಿಕೆಮಾಡಿಕೊಟ್ಟಳು. ಅವನಿಗೆ ಧೈರ್ಯ ತುಂಬಿದಳು. ಮ್ಯಾಕ್ಬೆತ್ ಚೂರಿಯನ್ನು ಕೈಯಲ್ಲಿಡಿದು. ರಾಜನ ಕೋಣೆಗೆ ಹೋಗಿ ಅವಸರದಲ್ಲಿ ಡಂಕನ್‌ನನ್ನು ಕೊಲೆ ಮಾಡಿದನು. ನಂತರ ಚೂರಿಯನ್ನು ಹೆಂಡತಿಗೆ ತೋರಿಸುತ್ತ ಕಣ್ಣೀರಿಟ್ಟನು. ಲೇಡಿಮ್ಯಾಕ್ಬೆತ್ ಗಂಡನನ್ನು ಸಮಾಧಾನಪಡಿಸಿ, ರಕ್ತದ ಕಲೆಗಳನ್ನು ಚೆನ್ನಾಗಿ ತೊಳೆದಿಕೊ ಎಂದು ಕರೆಯಿತ್ತಳು. ಅವನ ಕೈಲಿದ್ದ ಚೂರಿಯನ್ನು ನೋಡಿ ಅದನ್ನು ಡಂಕನ್ ಕೋಣೆಯಲ್ಲಿಡಲು ಸೂಚಿಸಿದಳು. ಅವನು ನಿರಾಕರಿಸಿದಾಗ, ತಾನೆ ಹೋಗಿ ಇಬ್ಬರು ಅಂಗರಕ್ಷಕರಿಗೆ ರಕ್ತ ಹಚ್ಚಿ. ಚೂರಿಯನ್ನು ಅವರ ಪಕ್ಕದಲ್ಲಿಡುತ್ತಾಳೆ. ಅವರ

ಮೇಲೆ ಕೊಲೆ ಆಪಾದನೆ ಹೊರಿಸುವುದು ಅವಳ ಉದ್ದೇಶವಾಗಿತ್ತು.

ಮಾರನೆಯ ದಿನ ಬೆಳಿಗ್ಗೆ ಮ್ಯಾಕ್‌ಡಫ್ ರಾಜನನ್ನು ಎಬ್ಬಿಸಲು ಹೋದಾಗ ಅವನ ಕೊಲೆಯಾಗಿರುವುದು ಪತ್ತೆಯಾಗುತ್ತದೆ. ರಾಜ ಕೊಲೆಯಾಗಿರುವ ಸುದ್ದಿ ಊರಿಗೆಲ್ಲ ಹಬ್ಬುತ್ತದೆ. ಲೆನಾಕ್ಸ್‌ನು ಅಂಗರಕ್ಷಕರೆ ಕೊಲೆಗಾರರೆಂದು ಸಂಶಯ ವ್ಯಕ್ತಪಡಿಸುತ್ತಾನೆ. ಮ್ಯಾಕ್ಬೆತ್ ಕಾವಲುಗಾರರನ್ನು ಕೊಂದುಬಿಡುತ್ತಾನೆ. ಇದು ತಪ್ಪೆಂಬ ಒಮ್ಮತದ ಅಭಿಪ್ರಾಯ ಎಲ್ಲರಲ್ಲೂ ಮೂಡುತ್ತದೆ. ಮ್ಯಾಕ್ಬೆತ್ ಕೋಪದಲ್ಲಿ ಹಾಗೆ ಮಾಡಿಬಿಟ್ಟೆ ಎಂದು ಸಮರ್ಥಿಸಿಕೊಳ್ಳುತ್ತಾನೆ. ಮಾಲ್ಕಮ್ ಇಂಗ್ಲೆಂಡ್‌ಗೂ, ಡೊನಾಲ್‌ಬೇನ್ ಐರ್ಲೆಂಡಿಗೂ ಓಡಿ ಹೋಗುತ್ತಾರೆ. ಆದರೆ ಸೈನ್ಯಕಟ್ಟಿ ರಾಜಹಂತಕರನ್ನು ಸದೆಬಡಿಯುವ ತೀರ್ಮಾನವೂ ಅವರಲ್ಲಿತ್ತು. ರಾಜ್ಯದ ಉನ್ನತ ಮಂಡಲಿ ಡಂಕನ್ ಮಕ್ಕಳೇ ತಂದೆಯನ್ನು ಕೊಂದರೆಂದು ತೀರ್ಮಾನಿಸಿ ಡಂಕನ್ನನ ಹತ್ತಿರ ಸಂಬಂಧಿಯಾದ ಮ್ಯಾಕ್ಬೆತ್‌ನನ್ನೆ ರಾಜನನ್ನಾಗಿ ನೇಮಿಸಿತು.

## 3ನೇ ಅಂಕ

ತಾನು ಸ್ಕಾಟ್‌ಲ್ಯಾಂಡ್ ರಾಜನಾದ ಸವಿನೆನಪಿಗಾಗಿ ಮ್ಯಾಕ್ಬೆತ್ ಔತಣಕೂಟವನ್ನು ಏರ್ಪಡಿಸುತ್ತಾನೆ. ದೇಶದ ಗಣ್ಯರಿಗೆಲ್ಲ ಆಹ್ವಾನ ನೀಡುತ್ತಾನೆ. ಬ್ಯಾಂಕೊ ಮತ್ತು ಅವನ ಮಗನಿಗೆ ವಿಶೇಷ ಆಹ್ವಾನ ನೀಡುವಲ್ಲಿ ಮುಂದಾಗುತ್ತಾನೆ. ಕಗ್ಗತ್ತಲು ರಾತ್ರಿಯಲ್ಲಿ ಅವರಿಬ್ಬರು ಬರುವ ದಾರಿಯಲ್ಲಿ ಇಬ್ಬರು ಕೊಲೆಗಡುಕರನ್ನಿರಿಸಿ ಅವರ ಕೊಲೆಗೆ ಸಂಚುಹೂಡುತ್ತಾನೆ. ಆದರೆ ಬ್ಯಾಂಕೊ ಕೊಲೆಯಾಗುತ್ತಾನೆ. ಫ್ಲಿಯಾನ್ಸ್ ತಪ್ಪಿಸಿಕೊಳ್ಳುತ್ತಾನೆ.

ರಾತ್ರಿ ಭೋಜನಕೂಟ ಆರಂಭವಾಗಿದೆ. ಕೊಲೆಗಾರರು ನಡೆದ ವಿಚಾರವನ್ನು ಬಾಗಿಲ ಬಳಿ ಮ್ಯಾಕ್ಬೆತ್‌ಗೆ ತಿಳಿಸುತ್ತಾರೆ. ಅತಿಥಿಗಣ್ಯರೆಲ್ಲ ತಮ್ಮತಮ್ಮ ಸ್ಥಳಗಳಲ್ಲಿ ಸಂತೋಷದಿಂದ ಊಟಕ್ಕೆ ಕೂರುತ್ತಾರೆ. ಆದರೆ ಬ್ಯಾಂಕೊ ಮತ್ತು ಫ್ಲಿಯಾನ್ಸ್‌ನ ಕುರ್ಚಿಗಳು ಖಾಲಿ ಇರುತ್ತದೆ. ಇದನ್ನು ಗಮನಿಸಿದ ಮ್ಯಾಕ್ಬೆತ್ "ನಮ್ಮ ನೆಚ್ಚಿನ ಮಿತ್ರ ಬ್ಯಾಂಕೊ ಮತ್ತು ಅವನ ಪ್ರೀತಿಯ ಪುತ್ರ ಫ್ಲಿಯಾನ್ಸ್ ಈ ಭವ್ಯ ಭೋಜನಕೂಟಕ್ಕೆ ಬರಲು ಸಾಧ್ಯವಾಗದೆ ಇದ್ದುದು ನಮಗೆ ಬಹಳ ಖೇದವನ್ನುಂಟುಮಾಡಿದೆ"[2] ಎಂದು ಅವರನ್ನು ನೆನಪಿಸಿಕೊಳ್ಳುತ್ತಾನೆ. ಬ್ಯಾಂಕೋನ ಪ್ರೇತ ಮ್ಯಾಕ್ಬೆತ್‌ಗೆ ಕಾಣುತ್ತದೆ. ಅವನು ವಿಚಿತ್ರವಾಗಿ ವರ್ತಿಸುತ್ತಾನೆ. ಅತಿಥಿಗಳೆಲ್ಲರೂ ಹೊರಟು ಹೋಗಲು ಸಿದ್ಧರಾದಾಗ ಲೇಡಿ ಮ್ಯಾಕ್ಬೆತ್ ನಮ್ಮ ಯಜಮಾನರು ಚಿಕ್ಕಂದಿನಿಂದಲೂ ಹೀಗೆಯೇ ವರ್ತಿಸುತ್ತಾರೆ. ದಯಮಾಡಿ ಭೋಜನ ಮುಂದುವರೆಸಿ ಎಂದು ಎಲ್ಲರನ್ನು ವಿನಂತಿಸಿಕೊಳ್ಳುತ್ತಾಳೆ. ಬ್ಯಾಂಕೊ ಪ್ರೇತ ಮತ್ತೊಮ್ಮೆ ಕಾಣಿಸಿಕೊಂಡಿತು. "ನೀನು ತಲೆಯನ್ನು ತೂಗಲು

ಸಾಧ್ಯವಾದರೆ, ಮಾತನ್ನು ಸಹ ಆಡಿ ಮುಗಿಸೋ"[3] ಎಂದು ಮ್ಯಾಕ್ಬೆತ್ ಅರಚುತ್ತಾನೆ. ಲೇಡಿ ಮ್ಯಾಕ್ಬೆತ್ ಪರಿಸ್ಥಿತಿಯನ್ನು ತಿಳಿಗೊಳಿಸಿ ಗಂಡನನ್ನು ಅವನ ಕುರ್ಚಿಯಲ್ಲಿ ಕೂರಿಸುತ್ತಾಳೆ.

ಮ್ಯಾಕ್ಬೆತ್ ದ್ರಾಕ್ಷಿರಸದ ಪಾನವನ್ನು ತನ್ನ ತುಟಿಗೆ ಸೋಕಿಸಿದ. ಮತ್ತೊಮ್ಮೆ ಪ್ರೇತ ಕಾಣಿಸಿತು. ಮ್ಯಾಕ್‌ಬೆತ್‌ನು "ಇಂಥ ನೋಟ ಬಿಟ್ಟು ಬೇರಾವ ರೂಪದಲ್ಲಿಯಾದರೂ ಬಾ ನನಗೆ ಹೆದರಿಕೆ ಇಲ್ಲ"[4] ಎನ್ನುತ್ತಾನೆ. ಬ್ಯಾಂಕೊ ಪ್ರೇತರೂಪ ಮಾಯವಾಗುತ್ತದೆ. ಅತಿಥಿಗಳಿಗೆ, ಲೇಡಿ ಮ್ಯಾಕ್ಬೆತ್ ತನ್ನ ಪತಿಯ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಕೂಟವನ್ನು ಮುಂದುವರಿಸದೆ. ಸಾಂಪ್ರದಾಯಿಕ ರೀತಿಯಲ್ಲಿ ಕಾಯದೆ ತಾವೆಲ್ಲರೂ ಹೇಗೆಂದರೆಹಾಗೆ ಬೇಗ ಹೊರಟುಹೋಗಿ ಎನ್ನುತ್ತಾಳೆ. ಮಾರನೆಯ ದಿನ ಮ್ಯಾಕ್ಬೆತ್ ಮೇಲೆ ಜನರಲ್ಲಿ ಕೊಲೆಯ ಸಂಶಯ ಹುಟ್ಟುತ್ತದೆ.

## 4ನೇ ಅಂಕ

ದಿನಕಳೆದಂತೆ ಮ್ಯಾಕ್ಬೆತ್‌ನ ದುಗುಡ ಹೆಚ್ಚಾಗಿ, ಅವನ ವರ್ತನೆಗಳು ವಿಚಿತ್ರವಾಗುತ್ತದೆ. ತನ್ನ ಭವಿಷ್ಯವನ್ನು ತಿಳಿಯುವ ಉದ್ದೇಶದಿಂದ ಮ್ಯಾಕ್ಬೆತ್ ಮಾಟಗಾತಿಯರನ್ನು ಹುಡುಕಿಕೊಂಡು ಹೊರಡುತ್ತಾನೆ. ಅವರ ಗವಿಯನ್ನು ಹೊಕ್ಕಾಗ ಅಲ್ಲಿ ಮಾಟಗಾತಿಯಾದ ರಾಣಿ 'ಹೆಕೇಟ್' ಇರುತ್ತಾಳೆ. ಮ್ಯಾಕ್ಬೆತ್ ಬರುವುದನ್ನು ತಿಳಿದಿದ್ದ ಈ ನಾಯಕಿಯು ಅವನು ಕೇಳಬಹುದಾದ ಪ್ರಶ್ನೆಗಳಿಗೆ ಉತ್ತರನೀಡಲು, ಅವನಿಗೆ ದೃಶ್ಯಗಳನ್ನು ತೋರಿಸಲು ವಿಶೇಷವಾದ ಕಷಾಯವನ್ನು ತಯಾರಿಸುತ್ತಿದ್ದಳು. ತನ್ನ ಉಳಿವಿಗಾಗಿ ಎಲ್ಲಾ ಸಂಪ್ರದಾಯಗಳನ್ನು ಗಾಳಿಗೆ ತೂರಿದ್ದ ಮ್ಯಾಕ್ಬೆತ್‌ನನ್ನು ಕಂಡರೆ ಇವಳಿಗೆ ಇಷ್ಟವಿರಲಿಲ್ಲ.

ಮನಸ್ಸಿನ ತುಂಬ ಧೈರ್ಯವನ್ನು ತುಂಬಿಕೊಂಡು ಬಂದಿದ್ದ ಮ್ಯಾಕ್ಬೆತ್ ನಿಮ್ಮ ಚಮತ್ಕಾರದ ವಿದ್ಯೆಯಿಂದ ನನ್ನ ಪ್ರಶ್ನೆಗಳಿಗೆ ಉತ್ತರ ನೀಡಿರೆಂದು ಮಾಟಗಾತಿಯರನ್ನು ಕೇಳುತ್ತಾನೆ. ಬಾಂಡಲಿಯಿಂದ ರಕ್ತ ಹತ್ತಿರುವ ಮಗುವೊಂದು ಮ್ಯಾಕ್ಬೆತ್ ಎಂದು ಕರೆದು ನೀನು ಧೈರ್ಯವಾಗಿರು "ತಾಯಿಯ ಗರ್ಭದಲ್ಲಿ ಜನಿಸಿದ ಯಾರು ನಿನ್ನನ್ನು ಕೊಲ್ಲಲಾಗದು" ಎನ್ನುತ್ತದೆ. ಕಿರೀಟಧಾರಿಯಾಗಿ ಕೈಯಲ್ಲಿ ಮರ ಹಿಡಿದಿರುವ ಮಗು "ಬರ್ನಾಮ್ ಕಾಡು ಡನ್ಸಿನೇನ್ ಗುಡ್ಡಕ್ಕೆ ನಡೆದು ಬರುವವರೆಗೂ ಅವನನ್ನು ಯಾರು ಸೋಲಿಸಲಾರರು ಎಂದು ಹೇಳುತ್ತದೆ. ಮನುಷ್ಯ ಸಂತತಿ ಇರುವವರೆಗೆ ನಾನು ಬದುಕಬಹುದೆಂದು ಮ್ಯಾಕ್ಬೆತ್ ಸಂತೋಷಪಡುತ್ತಾನೆ.

ಮ್ಯಾಕ್ಬೆತ್ " ಬ್ಯಾಂಕೊನ ಸಂತತಿಯು ಎಂದಾದರು ಸ್ಕಾಟ್‌ಲ್ಯಾಂಡನ್ನು ಆಳಲು

ಸಾಧ್ಯವಾಗುವುದೆ?" ಎಂದು ಮಾಟಗಾತಿಯನ್ನು ಪ್ರಶ್ನಿಸುತ್ತಾನೆ. ಅವರು "ಹೆಚ್ಚು ತಿಳಿಯಲು ಆಸಕ್ತಿ ವಹಿಸಬೇಡ" ಎಂದು ಎಚ್ಚರಿಸುತ್ತಾರೆ. ರಾಜನಂತೆ ಕಾಣುವ ಎಂಟು ನೆರಳುಗಳು ಮ್ಯಾಕ್ಬೆತ್‌ನ ಮುಂದೆ ಸಾಗಿದವು. ಕೊನೆಯಲ್ಲಿದ್ದವನು ಬ್ಯಾಂಕೊ. ಅವನು ಕೈಯಲ್ಲಿ ಹಿಡಿದಿದ್ದ ಗಾಜಿನ ಪಾತ್ರೆಯಲ್ಲಿ ಇನ್ನಷ್ಟು ಆಕಾರಗಳು ಗೋಚರಿಸಿದವು. ಮೈಯೆಲ್ಲ ರಕ್ತವಾಗಿದ್ದ ಬ್ಯಾಂಕೊ ಮ್ಯಾಕ್ಬೆತ್‌ನನ್ನು ನೋಡಿ ಮುಗುಳ್ನಗುತ್ತ ಅವುಗಳ ಕಡೆ ತೋರಿಸಿದ. ಅವರು ತನ್ನ ನಂತರ ಸ್ಕಾಟ್‌ಲ್ಯಾಂಡನ್ನು ಆಳುತ್ತಾರೆಂಬುದು ಮ್ಯಾಕ್ಬೆತ್‌ಗೆ ಗೊತ್ತಾಯಿತು. ಮ್ಯಾಕ್‌ಡಫನು ಡಂಕನ್ನನ ಹಿರಿಯ ಪುತ್ರ ಮ್ಯಾಲ್ಕಮ್‌ನನ್ನು ಇಂಗ್ಲೆಂಡಿನಲ್ಲಿ ಸಂಧಿಸಿ ಸಂಚು ಹೂಡುತ್ತಿದ್ದಾನೆಂದು ತಿಳಿದ ಮೇಲೆ, ಮ್ಯಾಕಡಫ್‌ನ ಬಂಗಲೆಯ ಮೇಲೆ ಆಕ್ರಮಣ ಮಾಡಿ, ಲೇಡಿ ಮ್ಯಾಕಡಫ್, ಮಕ್ಕಳು ಹಾಗು ಅವರ ಬಂಧು ವರ್ಗದವರನ್ನೆಲ್ಲ ಕೊಲೆಮಾಡಿಸಿದನು. ರಾಜನ ದುರಾಡಳಿತಕ್ಕೆ ಕೊನೆಹೇಳಲು ಮ್ಯಾಲ್ಕಮ್ ಮತ್ತು ಮ್ಯಾಕ್‌ಡಫ್ ಪಣತೊಟ್ಟರು. ಇಂಗ್ಲೆಂಡ್ ದೊರೆಯು ಸಹಕಾರ ನೀಡಿ ಸಮರ್ಥ ಸೈನ್ಯವನ್ನು ಕಳುಹಿಸಿದ. ಸ್ನೇಹಿತರಿಬ್ಬರು ತಮ್ಮ ಇಷ್ಟಾರ್ಥಗಳನ್ನು ಈಡೇರಿಸಿಕೊಳ್ಳಲು ಸಜ್ಜಾಗಿ ನಿಂತರು.

## 5ನೇ ಅಂಕ

ಅರಮನೆಯಲ್ಲಿದ್ದ ಲೇಡಿ ಮ್ಯಾಕ್‌ಬೆತ್‌ಳ ಸ್ಥಿತಿ ಶೋಚನೀಯವಾಗಿತ್ತು. ಮಾನಸಿಕ ನೆಮ್ಮದಿಯನ್ನು ಕಳೆದುಕೊಂಡು. ನಿದ್ರೆ ಮಾಡಲಾಗದೆ ದಿನೇ ದಿನೇ ಕುದಿಯುತ್ತಿದ್ದಾಳೆ. ಕತ್ತಲಲ್ಲಿ ಭಯಪಡುತ್ತ ಸದಾ ಮೋಂಬತ್ತಿಗಳು ಉರಿಯುತ್ತಲೇ ಇರಬೇಕೆಂದು ಬಯಸುತ್ತಾಳೆ. ತನ್ನ ಮನಸ್ಸಿನ ಭಾವನೆಗಳು ನಿದ್ರಾವಸ್ಥೆಯಲ್ಲಿ ಹೊರಹೊಮ್ಮುತ್ತಿದ್ದವು. ಮ್ಯಾಕ್‌ಬೆತ್ ನೇಮಿಸಿದ್ದ ವೈದ್ಯ ಹಾಗು ದಾದಿಯರು ಕರ್ತವ್ಯದಲ್ಲಿದ್ದಾಗ, ಒಮ್ಮೆ ತನ್ನ ಕೈಗಳಲ್ಲಿನ ಕಲೆಗಳನ್ನು ಹೋಗಲಾಡಿಸಬೇಕೆಂದು ಪ್ರಯತ್ನಿಸುತ್ತಿದ್ದಳು. ಡಂಕನ್‌ನ ಕೊಲೆಯ ಸಂದರ್ಭದ ಗುಪ್ತವಿಚಾರಗಳನ್ನು ಹೊರಹಾಕಿದಳು. ಲೇಡಿ ಮ್ಯಾಕ್‌ಬೆತ್‌ಳು ಊಟೋಪಚಾರಗಳನ್ನು ಬಿಡುತ್ತಾಳೆ. ಭಯ,ಚಿಂತೆ,ಅಳು ದಿನೇ ದಿನೇ ಹೆಚ್ಚುತ್ತದೆ. ತನ್ನ ಸುತ್ತ ಕಾವಲಿದ್ದರು ಲೇಡಿ ಮ್ಯಾಕ್‌ಬೆತ್ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಅತ್ತ "ಮಾಲ್ಕಮ್ ಸೈನ್ಯ ಬರ್ನಮ್ ಕಾಡಿಗೆ ಬರುತ್ತದೆ. ಮಾಲ್ಕಮ್ ಪ್ರತಿಯೊಬ್ಬರು ರೆಂಬೆಗಳನ್ನು ಕಡಿದು ಮುಂದೆ ಹಿಡಿದುಕೊಂಡು ನಡೆಯಿರಿ. ಆಗ ಶತ್ರುವಿಗೆ ನಮ್ಮ ಸಂಖ್ಯೆ ತಿಳಿಯುವುದಿಲ್ಲ ಎಂದು ಅಪ್ಪಣೆ ಮಾಡುತ್ತಾನೆ."[5] ಈ ಕಡೆ ಯುದ್ಧಕ್ಕೆ ಹೇಗೆ ಸಿದ್ಧನಾಗಬೇಕೆಂದು ಯೋಚಿಸುತ್ತಿದ್ದ ಮ್ಯಾಕ್‌ಬೆತ್‌ಗೆ ಪತ್ನಿಯ ಸಾವಿನ ಸುದ್ದಿ ತಲುಪುತ್ತದೆ. ಈಗ ಅವಳು ಸಾಯಬಾರದಿತ್ತೆಂದು ಪ್ರತಿಕ್ರಿಯಿಸುತ್ತಾನೆ.

ಮಾಲ್ಕಮ್‌ನು ಹತ್ತುಸಾವಿರ ಸೈನ್ಯದೊಂದಿಗೆ ದಾಳಿ ನಡೆಸಲು ಬರುತ್ತಿದ್ದಾನೆ. ಪ್ರತಿ ಸೈನಿಕರು ತನ್ನ ತಲೆಯ ಮೇಲೆ ಮರದ ಕೊಂಬೆಗಳನ್ನು ಹಿಡಿದು ಬರುತ್ತಿದ್ದರಿಂದ

ಮ್ಯಾಕ್‌ಬೆತ್ ಆತ್ಮ ವಿಶ್ವಾಸ ಕಳೆದುಕೊಂಡು, ಯುದ್ಧದ ಘಂಟೆ ಬಾರಿಸಿದನು. "ಹೋರಾಡುತ್ತಲೇ ಸಾಯೋಣ" ಎಂಬ ಸಿರ್ಧಾರಕ್ಕೆ ಬಂದನು. ಶತ್ರುಗಳಿಬ್ಬರು ವೀರಾವೇಶದಿಂದ ಹೋರಾಡಿದರು. ಸ್ತ್ರೀಗರ್ಭದಲ್ಲಿ ಹುಟ್ಟಿದವರಿಂದ ನನಗೆ ಸಾವಿಲ್ಲ. ಸುಮ್ಮನೆ ವ್ಯರ್ಥಪ್ರಯತ್ನ ಪಡಬೇಡವೆಂದ ಮ್ಯಾಕ್‌ಬೆತ್ ನಗುಮುಖದಿಂದ ಅಪಹಾಸ್ಯಮಾಡುತ್ತ ಮ್ಯಾಕ್‌ಡಫ್‌ನು ನಾನು ಸ್ತ್ರೀಗರ್ಭದಲ್ಲಿ ಜನಿಸಲಿಲ್ಲ, ಕಾಲಕ್ಕೆ ಮೊದಲೇ ತಾಯಿಯ ಉದರದಿಂದ ಶಸ್ತ್ರಚಿಕಿತ್ಸೆ ಮಾಡಿ ಹೊರತೆಗೆದರು. ಆಸೆಬಿಟ್ಟು ಶರಣಾಗು ನೀಚ ಎಂದ. ಯುದ್ಧ ಮಾಡಲು ಮುಂದಾದ ಮ್ಯಾಕ್‌ಬೆತ್ ಯಶಸ್ವಿಯಾಗುವುದಿಲ್ಲ. ಮ್ಯಾಕ್‌ಡಫ್ ಮ್ಯಾಕ್‌ಬೆತ್‌ನ ತಲೆಯನ್ನು ತರುತ್ತಾನೆ. ಜಯದ ಅಲೆಯಲ್ಲಿ ಮಾಲ್ಕಮ್ ರಾಜನಾಗುತ್ತಾನೆ. ಹೀಗೆ ದುರಾಸೆಗೆ ಸ್ಪಂದಿಸಿದ ಮಹಾಪುರುಷನೊಬ್ಬನ ದುರಂತದ ಕಥೆಯನ್ನು ಷೇಕ್ಸ್‌ಪಿಯರ್ ಪರಿಚಯಿಸಿದ್ದಾನೆ.

## II. ಪ್ರತಾಪರುದ್ರದೇವ ನಾಟಕದ ಕಥಾವಸ್ತು

### 1ನೇ ಅಂಕ

ಓಡ್ರದೇಶದಲ್ಲಿ ವಿಜಯಧ್ವಜನೆಂಬ ವೃದ್ಧರಾಜನಿದ್ದ. ಅವನ ಸೈನ್ಯದಲ್ಲಿ ವೀರಸೇನ ಮತ್ತು ಶೂರಸೇನರೆಂಬ ಸೇನಾಧಿಪತಿಗಳಿದ್ದರು. ಬರ್ಭರನು ವಿದರ್ಭರಾಯನ ಸೈನ್ಯಸೇರಿ ಅರಸನ ವಿರುದ್ಧ ತಿರುಗಿಬೀಳುತ್ತಾನೆ. ರಾಜ ವಿಜಯಧ್ವಜನು ತನ್ನ ಸೇನಾಧಿಪತಿಗಳಿಬ್ಬರಿಗೆ ಯುದ್ಧದ ಜವಾಬ್ದಾರಿ ವಹಿಸುತ್ತಾನೆ. ಯುದ್ಧವನ್ನು ಗೆದ್ದು ವೀರಸೇನ ಮತ್ತು ಶೂರಸೇನರು ಬರುವಾಗ ಮೂರು ಶಕ್ತಿಗಳು ಅವರನ್ನು ಎದುರುಗೊಳ್ಳುತ್ತವೆ. ಆ ಶಕ್ತಿಗಳಿಗೆ ಗಡ್ಡವಿದ್ದುದರಿಂದ ಅವನಿಗೆ ಅವರು ಸ್ತ್ರೀಯರೆಂದು ತಿಳಿಯಲು ಕಷ್ಟವಾಗುತ್ತದೆ. ವೀರಸೇನನು ಅವರನ್ನು ನೀವ್ಯಾರೆಂದು ಪ್ರಶ್ನಿಸುತ್ತಾನೆ. ಒಂದನೇ ಶಕ್ತಿ "ವೀರಸೇನ ಜಯವಾಗಲಿ ಬರ್ಭರಾಧಿಪಂ" ಎಂದು ನುಡಿಯುತ್ತದೆ. ಮೂರನೆಯ ಶಕ್ತಿ "ಜಯವಾಗಲಿ ರಾಜಾಧಿರಾಜ" ಎಂದು ಹಾರೈಸುತ್ತದೆ.

ತನ್ನ ಸ್ನೇಹಿತನನ್ನು ಮುಂದಿನ ರಾಜ ಎಂದು ಭವಿಷ್ಯದ ನುಡಿಯನ್ನಾಡಿದ ಶಕ್ತಿಗಳ ಬಗ್ಗೆ ಶೂರಸೇನ ಆಶ್ಚರ್ಯಗೊಳ್ಳುತ್ತಾನೆ. ತನ್ನ ಅದೃಷ್ಟವನ್ನು ಕೇಳಿ ತಿಳಿದುಕೊಳ್ಳುತ್ತಾನೆ. ಶಕ್ತಿಗಳ ಮಾತಿನ ಗುಂಗಿನಲ್ಲಿಯೇ ವೀರಸೇನ ಹೆಜ್ಜೆಯಿಡುತ್ತಿದ್ದನು. ನಂದರಾಜ ಮತ್ತು ವಾಮದೇವ ರಾಜನ ಪರವಾಗಿ ಸೇನಾಧಿಪತಿಗಳನ್ನು ಬರಮಾಡಿಕೊಳ್ಳುತ್ತಾರೆ. ನಂದರಾಜನು ವೀರಸೇನನಿಗೆ "ಬರ್ಭರಾಧಿಪತಿ ವಿದರ್ಭರಾಯನ ಸೈನದೊಡನೆ ಸೇರಿದ್ದರಿಂದ ಆರೋಪ ಹೊತ್ತು ಮರಣದಂಡನೆಗೆ ಗುರಿಯಾಗಿದ್ದಾನೆ. ಹೀಗಾಗಿ ಬರ್ಭರಾಧಿಪತಿಯಾಗಿ ರಾಜ ನಿನ್ನನ್ನು ನೇಮಿಸಿದ್ದಾನೆ." ಎಂದು ತಿಳಿಸುತ್ತಾನೆ. ಶಕ್ತಿಗಳ ಭವಿಷ್ಯದ ಮಾತುಗಳು

ವೀರಸೇನನಲ್ಲಿ ಮತ್ತಷ್ಟು ಭರವಸೆ ಹುಟ್ಟಿಸುತ್ತವೆ. ಅವನು ರಾಜನಾಗುವ ಕನಸು ಕಾಣುತ್ತಾನೆ.

ಬರ್ಭರನ ಮರಣದಂಡನೆಯ ಸಂದರ್ಭವನ್ನು ಪ್ರತಾಪರುದ್ರದೇವನು ತಂದೆಯಾದ ವಿಜಯಧ್ವಜನಿಗೆ ವಿವರಿಸಿರುತ್ತಾನೆ. ಅಷ್ಟರಲ್ಲಿ ವೀರಸೇನ, ಶೂರಸೇನರು ಆಗಮಿಸುತ್ತಾರೆ. ರಾಜ ಅವರನ್ನು ಗೌರವಿಸುತ್ತಾನೆ. ಈ ಸಂದರ್ಭದಲ್ಲಿ ವಿಜಯಧ್ವಜನು ವೀರಸೇನನ 'ವಲ್ಲಭಪುರಿ'ಗೆ ಒಂದು ರಾತ್ರಿ ಅತಿಥಿಯಾಗಿ ಹೋಗಲು ನಿರ್ಧರಿಸುತ್ತಾನೆ. ಈ ವಿಚಾರವು ವೀರಸೇನನಿಗೆ ಸಂತೋಷತರುತ್ತದೆ. ವೀರಸೇನನಿಂದ ಬಂದ ಪತ್ರವನ್ನು ಪತ್ನಿ ಚಂದ್ರವಲ್ಲಿ ಓದುತ್ತಾಳೆ. ಅದರಲ್ಲಿ ತನ್ನ ಪತಿ 'ಬರ್ಭರಾಧಿಪತಿ'ಯಾಗಿರುವ ವಿಷಯ ತಿಳಿದು ಸಂತೋಷಪಡುತ್ತಾಳೆ.

ಚಂದ್ರವಲ್ಲಿ ದೊರೆಯನ್ನು ಕೊಲ್ಲುವ ಸಂಚು ಹೂಡುತ್ತಾಳೆ. "ಹಾಲು ಕೊಡುವ ಹೃದಯ ವಿಷವನ್ನು ಕೊಡುವಂತೆ" ಕಾಳರಾತ್ರಿಯ ಶಕ್ತಿಗಳಲ್ಲಿ ಬೇಡಿಕೊಳ್ಳುತ್ತಾಳೆ, ವಲ್ಲಭಪುರಿಯ ಕೋಟೆಯ ಸಮೀಪ ಅತಿಥಿಗಳನ್ನು ಚಂದ್ರವಲ್ಲಿಯು ಸಡಗರದಿಂದ ಬರಮಾಡಿಕೊಳ್ಳುತ್ತಾಳೆ. ವೀರಸೇನನು ರಾಜನ ಕೊಲೆಯ ಬಗ್ಗೆ ಆಲೋಚಿಸುತ್ತಾನೆ. ಆದರೆ ಭಯ ಆವರಿಸುತ್ತದೆ. ಕೊಠಡಿಯಿಂದ ಅವನು ಹೊರಬರುತ್ತಾನೆ. ಚಂದ್ರವಲ್ಲಿಯು ಅರಸನ ಊಟ ಮುಗಿಯುತ್ತಿದೆ. ನೀನೇಕೆ ಹೊರಗೆ ಬಂದೆ? ಎನ್ನುತ್ತಾಳೆ. ಅವನು ದುಷ್ಕೃತ್ಯದ ಮೂಲಕ ಪಾಪಿಯಾಗುವುದಿಲ್ಲವೆಂದು ಕೊಲೆಯನ್ನು ನಿರಾಕರಿಸುತ್ತಾನೆ. ಚಂದ್ರವಲ್ಲಿ ಕಾರ್ಯಕ್ಷಮತೆಯುಳ್ಳವಳು. ಗಂಡನಲ್ಲಿ ಧೈರ್ಯ ತುಂಬುತ್ತಾಳೆ. ಸೇವಕರಿಗೆ ನಶೆ ಬರುವ ಪಾನಕವನ್ನು ಊಟದಲ್ಲಿ ಬೆರೆಸಿದ್ದೇನೆ. ಭಯಪಡಬೇಡವೆನ್ನುತ್ತಾಳೆ. ಮಧ್ಯರಾತ್ರಿಯಲ್ಲಿ ಕಠಾರಿಯಿಡಿದು ವೀರಸೇನನಿಗೆ ಕಾರ್ಯ ಸಾಧಿಸುವಂತೆ ತಿಳಿ ಹೇಳುತ್ತಾಳೆ. ನೋಡುಗರಿಗೆ ಸೇವಕರ ಮೇಲೆ ಅನುಮಾನ ಹುಟ್ಟುವಂತೆ ಅವರಿಗೆ ರಕ್ತ ಸವರಲು ಹೇಳುತ್ತಾಳೆ.

## 2ನೇ ಅಂಕ

ವೀರಸೇನನು ಕಠಾರಿಯನ್ನಿಡಿದು ಪೂರ್ವಯೋಜನೆಯಂತೆ ವಿಜಯಧ್ವಜನನ್ನು ಕೊಲ್ಲುತ್ತಾನೆ. ಬರುವಾಗ ಪ್ರತಾಪಸಿಂಹ ಕೋಣೆಯೊಂದರಲ್ಲಿ ಮಲಗಿರುವುದು ಗೋಚರಿಸುತ್ತದೆ. ಚಂದ್ರವಲ್ಲಿಯು ವಿಚಿತ್ರ ಸದ್ದನ್ನು ಕೇಳಿ ಎಚ್ಚರವಾಗುತ್ತಾಳೆ. ಅಷ್ಟರಲ್ಲಿ ವೀರಸೇನನು ಮಾಡಿಬಿಟ್ಟೆ! ಎಂದು ಅಬ್ಬರಿಸುತ್ತಾನೆ. ಮಾಡಿದ ಕೃತ್ಯಗಳ ಬಗ್ಗೆ ಆಲೋಚನೆ ಮಾಡಬಾರದು. ಮಾಡಿದರೆ ಬುದ್ಧಿ ವಿಕಲ್ಪವಾಗುವುದು ಎಂದು ಚಂದ್ರವಲ್ಲಿ ತಿಳಿಸುತ್ತಾಳೆ. ಧೈರ್ಯಹೊಂದಿ ಕೈಗಳನ್ನು ನೀರಲ್ಲಿ ತೊಳೆಯೆನ್ನುತ್ತಾಳೆ. ಅವನ ಕೈಯಲ್ಲಿದ್ದ ಕಠಾರಿನೋಡಿ ಅದನ್ನೇಕೆ ತಂದೆ? ಕಾವಲುಗಾರರ ಬಳಿಯೇ ಬಿಟ್ಟು ಬರಬೇಕಿತ್ತು ಎನ್ನುತ್ತಾಳೆ. ಮತ್ತೆ

ನಾನು ಹೋಗಲಾರೆನೆಂದು ವೀರಸೇನ ತಿರಸ್ಕರಿಸುತ್ತಾನೆ. ಚಂದ್ರವಲ್ಲಿಯೆ ಕಠಾರಿಯನ್ನಿಡಿದು ರಕ್ತವನ್ನು ಕಾವಲುಗಾರರಿಗೆ ಹಚ್ಚಿ ಕಠಾರಿಯನ್ನು ಅವರ ಪಕ್ಕದಲ್ಲಿಟ್ಟು ಬರುತ್ತಾಳೆ. ನಂತರ ಪತಿ–ಪತ್ನಿಯರಿಬ್ಬರು ಏನೂ ತಿಳಿಯದವರಂತೆ ನಿದ್ರೆಗೆ ಜಾರುತ್ತಾರೆ.

ಜಯಸಿಂಹನು ರಾಜನ ಅಪ್ಪಣೆಯನ್ನು ನೆನೆದು ಗಟ್ಟಿಯಾಗಿ ಕೂಗಿ ಎಬ್ಬಿಸಲು ಪ್ರಯತ್ನಿಸುತ್ತಾನೆ. ರಾಜನ ಸಾವಿನ ಕೃತ್ಯ ನೋಡಿ ಕಿರುಚುತ್ತಾನೆ. ವೀರಸೇನ ಪ್ರಶ್ನಿಸಿದಾಗ, ರಾಜರ ಹತ್ಯೆಯಾಗಿದೆಯೆಂದು ತಿಳಿಸುತ್ತಾನೆ. ಎಲ್ಲರೂ ಗಲಿಬಿಲಿಗೊಳ್ಳುತ್ತಾರೆ. ಕಾವಲುಗಾರರ ಮುಖ– ಕೈ ರಕ್ತಮಯವಾಗಿರುವುವು, ಅವರ ಬುದ್ಧಿಭ್ರಮಣೆಯನ್ನು ನೋಡಿದರೆ ಯಾರ ಜೀವಕ್ಕೂ ಉಳಿವಿಲ್ಲ, ಕೋಪಾವೇಶದಲ್ಲಿ ನಾನು ಅವರನ್ನು ಕೊಂದುಬಿಟ್ಟೆ ಎಂದು ವೀರಸೇನ ತಿಳಿಸುತ್ತಾನೆ. ಜಯಸಿಂಹನಿಗೆ ಇದು ಇಷ್ಟವಾಗುವುದಿಲ್ಲ. ಎಲ್ಲರು ಈ ವಿಚಾರದ ಬಗ್ಗೆ ಚರ್ಚಿಸುವ ನಿರ್ಧಾರಕ್ಕೆ ಬರುತ್ತಾರೆ. ಆದರೆ ಪ್ರತಾಪಸಿಂಹ, ಪ್ರತಾಪರುದ್ರದೇವ ಈ ಕೃತ್ಯದಿಂದ ಬೇಸರಗೊಳ್ಳುತ್ತಾರೆ. ಪರಿಸ್ಥಿತಿಯ ತಿಳುವಿಗಾಗಿ ಪ್ರತಾಪರುದ್ರ ಪಾಟಲಿಪುರಕ್ಕೆ ಹೋಗಿ ಮಗಧನನ್ನು ಸೇರಿಕೊಳ್ಳುತ್ತಾನೆ.

ಜಯಸಿಂಹನು ಕೊಲೆಯ ಬಗ್ಗೆ ಕಾವಲುಗಾರರ ಮೇಲೆ ಅನುಮಾನವಿದೆ. ರಾಜಪುತ್ರರಾದ ಪ್ರತಾಪರುದ್ರದೇವ ಮತ್ತು ಪ್ರತಾಪಸಿಂಹ ಓಡಿಹೋಗಿರುವುದರಿಂದ ಅವರ ಮೇಲೂ ಗುಮಾನಿಯಿದೆ ಎನ್ನುತ್ತಾನೆ. ಈ ಬೆಳವಣಿಗೆ ಆಶ್ಚರ್ಯ ತರುತ್ತದೆ. ಜೊತೆಗೆ ವೀರಸೇನ ರಾಜನಾಗಿ ಆಯ್ಕೆಯಾಗುತ್ತಾನೆ. ವೀರಸೇನನು ರಾಜ್ಯಾಭಿಷೇಕಕ್ಕಾಗಿ "ಏಕಚಕ್ರನಗರಿಗೆ" ಹೋಗುತ್ತಾನೆ. ಜಯಸಿಂಹ ತನ್ನೂರಿನ ಕಡೆಗೆ ದಾರಿ ಬೆಳೆಸುತ್ತಾನೆ. ನಂದರಾಜ ಏಕಚಕ್ರಪುರದತ್ತ ಪ್ರಯಾಣ ಹೊರಾಡುತ್ತಾನೆ.

## 3ನೇ ಅಂಕ

ವೀರಸೇನ ರಾಜನಂತೆ ಕಂಗೊಳಿಸುತ್ತ, ಚಂದ್ರವಲ್ಲಿ ರಾಣಿಯಂತೆ ಬೀಗುತ್ತ, ಉಪರಾಜರು ಮತ್ತು ಪರಿವಾರದವರೊಡನೆ ಬರುತ್ತಿದ್ದಾರೆ. ಶೂರಸೇನನ್ನು ನೋಡಿ ವೀರಸೇನನು ಈ ದಿವಸ ದರಬಾರಾಗುವುದು, ನಂತರ ರಾಜಮಂಡಲಕ್ಕೆಲ್ಲ ಔತಣವಿದೆ. ದಯಮಾಡಿ ಇವೆರಡಕ್ಕೂ ನೀನು ತಪ್ಪದೆ ಬರಬೇಕೆಂದನು. ಶೂರಸೇನ ತಾನು ಕೊಂಚ ದೂರ ಹೊರಟಿರುವೆ, ರಾತ್ರಿ ಭೋಜನದ ಕಾಲಕ್ಕೆ ಬಂದು ಸೇರಿಕೊಳ್ಳುವೆನೆಂದು ಹೇಳಿ ಹೊರಡುತ್ತಾನೆ. ಇಬ್ಬರು ಕೊಲೆಗಡುಕರನ್ನು ವೀರಸೇನ ಕರೆಸಿ ಅವರಿಗೆ, ಈ ದಿನ ರಾತ್ರಿ ಶೂರಸೇನ ಮತ್ತು ಅವನ ಮಗ ಅದ್ರಿ ಬರುವ ದಾರಿಯಲ್ಲಿ ಕುಳಿತು ಅವರನ್ನು ಕೊಲೆಮಾಡುವಂತೆ ಪ್ರೇರೇಪಿಸುತ್ತಾನೆ.

ಅರಮನೆಯ ಭೋಜನಶಾಲೆಯಲ್ಲಿ ವೀರಸೇನನು ಅತಿಥಿಗಳೆಲ್ಲರನ್ನು ಪದ್ಧತಿಯಂತೆ ಅವರವರ ಸ್ಥಳದಲ್ಲಿ ಕುಳಿತುಕೊಳ್ಳಲು ವಿನಂತಿಸುತ್ತಾನೆ. ಈ ಸಂತೋಷ ಕೂಟದಲ್ಲಿ ಎಲ್ಲರೂ ಮೊದಲ ಸುತ್ತಿನ ಪಾನಸೇವಿಸಲು ಹೇಳುತ್ತಾನೆ. ಅಷ್ಟರಲ್ಲಿ ಕೊಲೆಗಡುಕ ಬಾಗಿಲ ಬಳಿ ಕಾಣಿಸಿಕೊಳ್ಳುತ್ತಾನೆ. ಶೂರಸೇನನ ಕುತ್ತಿಗೆಯನ್ನು ಕತ್ತರಿಸಿದೆ ಆದರೆ ಅದ್ರಿಯು ತಪ್ಪಿಸಿಕೊಂಡ ಎನ್ನುತ್ತಾನೆ. ವೀರಸೇನ ಕೃತಜ್ಞತೆ ಸಲ್ಲಿಸಿ ಅವರನ್ನು ಬೀಳ್ಕೊಡುತ್ತಾನೆ. ಚಂದ್ರವಲ್ಲಿಯ ಸೂಚನೆ ಮೇರೆಗೆ ವೀರಸೇನನು ಅತಿಥಿಗಳನ್ನು ಸಾವಕಾಶವಾಗಿ ಭೋಜನ ಮಾಡುವಂತೆ ಕೇಳಿಕೊಳ್ಳುತ್ತಾನೆ. ಅಲ್ಲಿ ಶೂರಸೇನನ ಪ್ರೇತ ಬಂದು ಕೂತುಕೊಳ್ಳುತ್ತದೆ. ಇದು ಕೇವಲ ವೀರಸೇನನಿಗೆ ಕಾಣಿಸುತ್ತದೆ. ಇದನ್ನು ಯಾರು ಮಾಡಿದಿರೆಂದು ವೀರಸೇನ ಪ್ರಶ್ನಿಸುತ್ತಾನೆ. ಚಂದ್ರವಲ್ಲಿ ತನ್ನ ಪತಿಗೆ ಈ ಖಾಯಿಲೆ ಮೊದಲಿನಿಂದಲೂ ಇರುವುದು. ನೀವು ಊಟಮಾಡಿ ಎಂದು ತಿಳಿಸುತ್ತಾಳೆ. ವೀರಸೇನ ದ್ರಾಕ್ಷಾರಸವನ್ನು ಕೊಡಿ. ನಿಮ್ಮೆಲ್ಲರ ಕ್ಷೇಮ ಮತ್ತು ಬರದಿರುವ ಪ್ರಿಯಮಿತ್ರ ಶೂರಸೇನನ ಕ್ಷೇಮಕ್ಕಾಗಿಯೂ ಕುಡಿಯುವೆನೆನ್ನುತ್ತಾನೆ. ಮತ್ತೆ ಪ್ರೇತ ಕಾಣಿಸಿಕೊಳ್ಳುತ್ತದೆ. ವೀರಸೇನನು ಭಯಭೀತನಾಗಿ ಕಿರುಚುತ್ತಾನೆ. ಚಂದ್ರವಲ್ಲಿಯು ಆನಂದದಿಂದ ಕೂಡಿದ್ದ ಈ ಸಭೆಯನ್ನು ಕಲಕಿಬಿಟ್ಟೆ. ಎಲ್ಲರೂ ಮಾತನಾಡದೆ, ಜಾಗೃತೆಯಾಗಿ ಪದ್ಧತಿಯನ್ನನುಸರಿಸದೆ ಒಂದೇ ಬಾರಿಗೆ ಪ್ರಯಾಣ ಬೆಳಸಿ ಎಂದು ಹೇಳಿ ವಿನಂತಿಸಿಕೊಳ್ಳುತ್ತಾಳೆ. ವೀರಸೇನನು ಶಕ್ತಿಗಳನ್ನು ಕಾಣಲು ನಿರ್ಧರಿಸುತ್ತಾನೆ.

## 4ನೇ ಅಂಕ

ಕತ್ತಲೆಯ ಗವಿಯೊಂದರಲ್ಲಿ ಮೂರು ಶಕ್ತಿಗಳು ಬಂದು ಬಾನೆಯನ್ನಿಟ್ಟು ಅದಕ್ಕೆ ಬೆಂಕಿಹಾಕಿದ್ದಾರೆ. ಅಷ್ಟರಲ್ಲಿ ವೀರಸೇನ ಬರುತ್ತಾನೆ. ಧೈರ್ಯವನ್ನು ತುಂಬಿಕೊಂಡು ನನ್ನ ಒಂದು ಪ್ರಶ್ನೆಗೆ ಉತ್ತರ ಕೊಡುತ್ತೀರ ಎನ್ನುತ್ತಾನೆ. ಶಕ್ತಿಗಳು ವೀರಸೇನನ ಆಸೆಯಂತೆ ಯಕ್ಷಿಣಿಯನ್ನು ಕರೆಯುತ್ತಾರೆ. ಬಾನಿಯಿಂದ ಆಯುಧ ಧರಿಸಿರುವ ಶಿರಸ್ಸು ಮೇಲಕ್ಕೇಳುತ್ತದೆ. "ಜಯಸಿಂಹ'ನ ವಿಚಾರದಲ್ಲಿ ಎಚ್ಚರದಿಂದಿರು" ಎಂದು ಹೇಳಿ ಬಾನೆಗಿಳಿಯುತ್ತದೆ. ರಕ್ತಮಯವಾದ ಶಿರಸ್ಸೊಂದು ಮೇಲೇಳುತ್ತದೆ. "ಮಡದಿಯ ಗರ್ಭದಿಂದ ಹುಟ್ಟಿದವರು ಕೇಡು ಮಾಡಲು ಸಾಧ್ಯವಿಲ್ಲ" ಎಂದು ಹೇಳಿ ಬಾನೆಗಿಳಿಯುತ್ತದೆ. ಕಿರೀಟ ಧರಿಸಿರುವ ಶಿರಸ್ಸೊಂದು ಮರದ ಕೊನೆಯೊಡನೆ ಮೇಲಕ್ಕೇಳುತ್ತದೆ. "ವಲ್ಲಭಪಟ್ಟಣದ ಕಾಡಿನ ವೃಕ್ಷವು ಬರುವವರೆಗೂ ನಿನಗೆ ಸಾವಿಲ್ಲ" ಎನ್ನುತ್ತದೆ. ನನಗೆ ಸಾವಿಲ್ಲ ಎಂದು ವೀರಸೇನ ಬೀಗುತ್ತಾನೆ. ಚಿತ್ರಪಟದಲ್ಲಿ ನೆರಳಿನಂತೆ, ಎಂಟು ಜನ ದೊರೆಗಳು ಹೋಗುತ್ತಿರುವರು. ಕಡೆಯವನ ಕೈಲಿ ಜಪಸರವಿರುವುದು. ಅವರಂತೆಯೆ ಅವರ ಹಿಂದೆ ಶೂರಸೇನನ ನೆರಳು ಹೋಗುತ್ತಿರುವದು. ವೀರಸೇನನು "ಮಾರಿಯರೇ! ನನಗೆ ಏಕೆ, ಇದನ್ನು ತೋರಿಸಿದಿರಿ ನಿಲ್ಲಿಸಿ" ಎಂದು ಕಣ್ಣುಮುಚ್ಚಿ ನಿಲ್ಲುತ್ತಾನೆ. ಶೂರಸೇನನ

ನೆರಳು ವೀರಸೇನನ ಕಡೆಗೆ ತೋರಿಸಿ ನಕ್ಕಿದ್ದರಿಂದ ಅವರು ತನ್ನ ನಂತರ ರಾಜ್ಯವನ್ನು ಆಳುತ್ತಾರೆಂಬ ವಿಚಾರ ಮನದಟ್ಟಾಗುತ್ತದೆ.

ನಂದರಾಜನು ಜಯಸಿಂಹನ ಪತ್ನಿಯನ್ನು ಭೇಟಿಯಾಗಿ, ನಾವು ಆಚರಣೆಯಲ್ಲಿ ಸರಿಯಾಗಿದ್ದರೂ, ಭಯದಲ್ಲಿ ರಾಜದ್ರೋಹಿಗಳಾಗಿರುವೆವು. ನಿನ್ನ ಪತಿ ಓಡಿ ಹೋದದ್ದು ಭಯದಿಂದಲೋ, ಬುದ್ಧಿವಂತಿಕೆಯಿಂದಲೊ ಗೊತ್ತಿಲ್ಲ ಎನ್ನುತ್ತಾನೆ. ಜಯಸಿಂಹನ ಪತ್ನಿ ಅವರಿಗೆ ನಮ್ಮಲ್ಲಿ ವಿಶ್ವಾಸವಿಲ್ಲ ಎನ್ನುತ್ತಾಳೆ. ಅಷ್ಟರಲ್ಲಿ ಚರನು ಬಂದು ನಿಮಗೆ ಅಪಾಯವಿದೆ, ಮಗನೊಡನೆ ಮತ್ತೆಲ್ಲಾದರೂ ಮರೆಯಾಗಿರಿ, ಭಗವಂತ ನಿಮ್ಮನ್ನು ರಕ್ಷಿಸಲಿ ಎನ್ನುತ್ತಾನೆ. ಅಷ್ಟರಲ್ಲಿ ಕೊಲೆಗಾರರು ಜಯಸಿಂಹನ ಮನೆಗೆ ಬಂದು ಅವನ ಮಗನನ್ನು ಕೊಲ್ಲುತ್ತಾರೆ. ಜಯಸಿಂಹನ ಪತ್ನಿಯನ್ನು ಅಟ್ಟಿಸಿಕೊಂಡು ಹೋಗುತ್ತಾರೆ. ಮಗಧರಾಯನ ಅರಮನೆಯ ಭಾಗವೊಂದರಲ್ಲಿ ಪ್ರತಾಪರುದ್ರ ಮತ್ತು ಜಯಸಿಂಹನ ಭೇಟಿಯಾಗುತ್ತದೆ. ಮಗದ ಸೈನ್ಯವು ಸೇನಾಪತಿಯಾದ ಶೇಖರನೊಡನೆ ಓಡ್ರ ದೇಶಕ್ಕೆ ಪ್ರಯಾಣಿಸಲು ಸಿದ್ಧವಾಗಿತ್ತು. ನಾವಿಬ್ಬರು ಅದರ ಸಂಗಡ ಹೋಗಬಹುದು ಎಂದು ಪ್ರತಾಪನಿಗೆ ಜಯಸಿಂಹ ತಿಳಿಸುತ್ತಾನೆ. ನಂದರಾಜ ಬಂದು ಜಯಸಿಂಹನ ಪತ್ನಿ-ಪುತ್ರರು ಹತರಾದ ಸುದ್ದಿ ಮುಟ್ಟಿಸುತ್ತಾನೆ. ಜಯಸಿಂಹ ದುಃಖಿಸುತ್ತಾನೆ. ಪ್ರತಾಪರುದ್ರನು ಸಮಾಧಾನ ಪಡಿಸುತ್ತಾನೆ. ಅವರಲ್ಲೇನು ಅಪರಾಧವಿರಲಿಲ್ಲ ನನ್ನ ತಪ್ಪಿಗಾಗಿ ಅವರು ಮೃತ್ಯುವಿನ ಕೂಪಕ್ಕೆ ಬಲಿಯಾದರು. ಇನ್ನಾದರೂ ಅವರು ಸ್ವರ್ಗದಲ್ಲಿ ಸುಖವಾಗಿರಲಿ ಎಂದು ಜಯಸಿಂಹ ಬೇಡುತ್ತಾನೆ.

## 5ನೇ ಅಂಕ

ವೀರಸೇನನ ಶಯನಗೃಹದಲ್ಲಿ ಚಂದ್ರವಲ್ಲಿ ಪ್ರಜ್ಞಾಹೀನ ಸ್ಥಿತಿಯಲ್ಲಿದ್ದಾಳೆ. ವೈದ್ಯರಿಗೆ ಚೇಟಿ (ದಾದಿ) ಚಂದ್ರವಲ್ಲಿಯ ಸ್ಥಿತಿಗತಿಯನ್ನು ವಿವರಿಸುತ್ತಾಳೆ. "ಉರಿಯುವ ಮೇಣದ ಬತ್ತಿ ಇವಳ ಬಳಿ ಸದಾ ಇರಬೇಕು". ಅಷ್ಟರಲ್ಲಿ ಚಂದ್ರವಲ್ಲಿ ತನ್ನ ಕೈಗಳನ್ನು ತೊಳೆದು ಕೊಳ್ಳುವಂತೆ ನಟಿಸುತ್ತಿದ್ದಾಳೆ. ಅಸಹ್ಯ ಕಲೆಯೆ ತೊಲಗು ಎನ್ನುತ್ತಾಳೆ. ವೃದ್ಧನಲ್ಲಿಷ್ಟು ರಕ್ತವಿತ್ತೆಂದು ಯಾರು ತಿಳಿದಿದ್ದರು ಎಂದು ಮಾತನಾಡಿಕೊಳ್ಳುತ್ತಾಳೆ. ಈ ಮಾತಿನಿಂದ ವೈದ್ಯ ಮತ್ತು ದಾದಿಯರಿಗೆ ಇವಳೇ ಕೊಲೆಗಾರ್ತಿ ಇರಬಹುದೆಂಬ ಅನುಮಾನ ಹುಟ್ಟುತ್ತದೆ. ಮಗಧ ಸೈನ್ಯವು ಸಮೀಪಿಸುತ್ತಿರುವುದನ್ನು ನಳ ಗುರುತಿಸುತ್ತಾನೆ. ವಾಮದೇವನು ಈಶಾನ್ಯ ದಿಕ್ಕಿನ ಕಾಡಿನಲ್ಲಿ ಅವರ ಜೊತೆ ಸೇರಲು ತಿಳಿಸುತ್ತಾನೆ. ಕಳಿಂಗನು ಶೇಖರನ ಮಗನಿದ್ದಾನೆ. ಆದರೆ ಪ್ರತಾಪಸಿಂಹನಿಲ್ಲವೆನ್ನುತ್ತಾನೆ. ವೀರಸೇನನ ದುರ್ನಡತೆಯಿಂದಲೇ ಜನ ಚದರಿಹೋಗುತ್ತಿದ್ದಾರೆ. ತಾನು ಮಾಡಿದ ಕೊಲೆಗಳಿಗೆ ತಕ್ಕ ಫಲವನ್ನು ಈಗವನು

ಅನುಭವಿಸುತ್ತಾನೆ ಎಂದು ಮಾತನಾಡಿಕೊಳ್ಳುತ್ತಾರೆ. ದೂತನ ಮೂಲಕ ಉಪರಾಜರು ಪ್ರತಾಪರುದ್ರನ ಪರ ಹೋದದ್ದು ತಿಳಿಯುತ್ತದೆ. ಪ್ರತಾಪರುದ್ರ ಸ್ತ್ರೀಗರ್ಭ ಸಂಭವ. ಶಕ್ತಿಗಳು ಮಡದಿಯ ಗರ್ಭದಿ ಹುಟ್ಟಿದವ ಕೇಡನು ಮಾಡುವುದಿಲ್ಲವೆಂದು ಹೇಳಿದ್ದಾರೆ. ಇವರೇನು ಮಾಡಬಲ್ಲರು ಎಂದು ಸಮಾಧಾನಪಟ್ಟುಕೊಳ್ಳುತ್ತಾನೆ.

ಪದಾತಿಯು ಮಗಧನ ಹತ್ತು ಸಾವಿರ ಪಡೆಯು ಬರುತ್ತಿರುವ ವಿಚಾರ ತಿಳಿಸುತ್ತಾನೆ. ವೀರಸೇನನು ಅವನನ್ನು ಬೈದು ಹೊರಹಾಕುತ್ತಾನೆ. ಪಾರ್ಶ್ವಕನನ್ನು ಕರೆಸುತ್ತಾನೆ. ಕೇಳಿದ್ದೆಲ್ಲ ನಿಜ ಎಂಬ ಅಭಿಪ್ರಾಯ ಪಾರ್ಶ್ವಕನದು. ವೀರಸೇನ ಯುದ್ಧಕ್ಕೆ ಸಜ್ಜಾಗುತ್ತಾನೆ. ಪ್ರತಾಪರುದ್ರನು ವಲ್ಲಭೆಯ ಈಶಾನ್ಯ ದಿಕ್ಕಿನ ಕಾಡಿಗೆ ಪ್ರವೇಶಿಸಿದಾಗ, ಈ ಕಾಡಿನಲ್ಲಿ ಪ್ರತಿಯೊಬ್ಬನು ಒಂದೊಂದು ಕೊಂಬೆಯನ್ನು ಕಡಿದು ಕೈಲಿ ಹಿಡಿದುಕೊಂಡು ತೆರಳಿರಿ. ಶತ್ರುವಿಗೆ ನಮ್ಮ ಸಂಖ್ಯೆ ತಿಳಿಯದ ಹಾಗೆ ಎಚ್ಚರವಹಿಸಿ ಎಂದು ಸೈನ್ಯಕ್ಕೆ ತಿಳಿಸುತ್ತಾನೆ. ವಲ್ಲಭಪುರಿ ಕೋಟೆಯ ಬಳಿ ಸೈನಿಕರಿಗೆ ವೀರಸೇನ ಸಲಹೆ ನೀಡುತ್ತಿದ್ದಾಗ ಸ್ತ್ರೀಯರ ರೋದನ ಕೇಳಿಸುತ್ತದೆ. ಪಾರ್ಶ್ವಕನು "ಮಹಾರಾಣಿಯವರು ಗತಿಸಿಹೋದರಂತೆ" ಎಂಬ ವಿಚಾರ ತರುತ್ತಾನೆ. ವೀರಸೇನನು ಈ ವಾರ್ತೆಯನ್ನು ಕೆಲವು ಕಾಲ ಕಳೆದ ನಂತರ ಕೇಳಬೇಕಾಗಿತ್ತು ಎಂದು ಪ್ರತಿಕ್ರಿಯಿಸುತ್ತಾನೆ. ಪದಾತಿಯು ಈಶಾನ್ಯ ದಿಕ್ಕಿನಿಂದ ಕಾನನವು ನಡೆದು ಬರುವಂತೆ ಕಾಣಿಸಿತು ಎನ್ನುತ್ತಾನೆ. ಶಕ್ತಿಗಳ ಮಾತು ನೆನಪಾಗುತ್ತದೆ. ಸಮರಕ್ಕೆ ಸಿದ್ಧವಾಗಿ ವೀರಸೇನ ಹೊರಡುತ್ತಾನೆ.

ವಲ್ಲಭಕೋಟೆ ಸಮೀಪಿಸಿದಾಗ ಪ್ರತಾಪರುದ್ರ ಕೊನೆಗಳನ್ನು ಬಿಸಾಡಿ ಯುದ್ಧವನ್ನು ಪ್ರಾರಂಭಿಸುವಂತೆ ಸಲಹೆ ನೀಡುತ್ತಾರೆ. ಯುದ್ಧರಂಗದಲ್ಲಿ ಜಯಸಿಂಹನು ವೀರಸೇನನನ್ನು ನೋಡಿ ಕದನ ಮಾಡಲು ಆಹ್ವಾನಿಸುತ್ತಾನೆ. ಪತ್ನಿಸುತರನ್ನು ಕೊಂದೆಯ? ನಾನು ನಿನ್ನ ಮೂಳೆ ಮುರಿಯುವೆ ಎನ್ನುತ್ತಾನೆ. 'ನನ್ನನ್ನು ಕುರಿತು ಹೇಳಿದಾಗ ವೀರಸೇನನು ಪಿಶಾಚಿಗಳು ನಂಬಿಕೆಯ ಮಾತಿನಿಂದ ವಂಚಿಸಿದರು. ಎಂದುಕೊಳ್ಳುತ್ತಾನೆ. ಇಬ್ಬರಿಗೂ ಜಗಳ ಮುಂದುವರಿಯುತ್ತದೆ. ಕೋಟೆಬಾಗಿಲು ಪ್ರವೇಶಿಸಿದ ಪ್ರತಾಪರುದ್ರದೇವ ಎಲ್ಲಾ ಮಿತ್ರರೂ ಸುಖವಾಗಿ ಮರಳಲಿ ಎನ್ನುತ್ತಾನೆ. ಜಯಸಿಂಹ, ಶೇಖರನ ಮಗನನ್ನು ನೆನಪಿಸಿಕೊಳ್ಳುತ್ತಾನೆ. ನಂದರಾಜನು ಶೇಖರನ ಮಗ ವೀರಸ್ವರ್ಗವನ್ನಪ್ಪಿದ ವಿಚಾರ ತಿಳಿಸುತ್ತಾನೆ. ಶೇಖರ ಯಾರು ವ್ಯಸನಪಡದಿರುವಂತೆ ಕೇಳುತ್ತಾನೆ. ಅಷ್ಟರಲ್ಲಿ ಜಯಸಿಂಹನು ವೀರಸೇನನ ತಲೆಯೊಡನೆ ಬರುತ್ತಾನೆ. ಜಯಸಿಂಹನು ಪ್ರತಾಪರುದ್ರದೇವನನ್ನು ಸುಖದಿಂದ ಬಾಳೆಂದು ಹಾರೈಸುತ್ತಾನೆ. ಓಡ್ರರಾಜ ಚಿರಕಾಲ ಬಾಳಿ ಪ್ರಖ್ಯಾತಿ ಗಳಿಸಲೆಂದು ನಾಡಿನ ಜನರೆಲ್ಲರು ಜಯಘೋಷ ಕೂಗುತ್ತಾರೆ.

# III ಪ್ರತಾಪರುದ್ರದೇವ ನಾಟಕದ ಮುಖ್ಯಪಾತ್ರಗಳು

## ವಿಜಯಧ್ವಜ

ಷೇಕ್ಸ್‌ಪಿಯರ್‌ನ 'ಡಂಕನ್' ಇಲ್ಲಿ ವಿಜಯಧ್ವಜನಾಗಿದ್ದಾನೆ. ಸಾತ್ತ್ವಿಕ ವ್ಯಕ್ತಿಯಾದ ಈತ, ದೇಶದ ರಾಜನಾಗಿ ದಕ್ಷ ಹಾಗೂ ಪ್ರಾಮಾಣಿಕತೆಯಿಂದ ತನ್ನ ಪ್ರಜೆಗಳನ್ನು ತನ್ನ ಮಕ್ಕಳ ಹಾಗೆ ನೋಡಿಕೊಳ್ಳುತ್ತಿದ್ದನು. ಆದರೆ ಈತನಲ್ಲಿ ದೌರ್ಬಲ್ಯಗಳುಂಟು. ಪ್ರತಿಯೊಂದು ವಿಷಯಕ್ಕೆ ಎಲ್ಲರೂ ಒಳ್ಳೆಯವರೆಂದು ಭಾವಿಸುತ್ತಿದ್ದ. ಇದರ ಫಲವೇ ವೀರಸೇನನ ಉನ್ನತಿಗೆ ಸಹಕಾರಿಯಾಯಿತು. ದೇಶದ ಉನ್ನತವಾದ ಅಧಿಕಾರವನ್ನು ವೀರಸೇನನಿಗೆ ನೀಡಿ ತನ್ನ ಉದಾರತೆಯನ್ನು ತೋರಿಸುತ್ತಾನೆ. ಷೇಕ್ಸ್‌ಪಿಯರ್ – I love it an absolute trust ಎಂದು ಹೇಳುವುದನ್ನು ಶ್ರೀಕಂಠೇಶಗೌಡರು– ಈ ಬರ್ಭರನು ಯೋಗ್ಯನೆಂದು ತಿಳಿದವರಲ್ಲಿ ಸಂಪೂರ್ಣವಾದ ನಂಬಿಕೆಯನ್ನಿಟ್ಟಿದ್ದೆನು ಎಂದು ಅನುವಾದಿಸಿದ್ದಾರೆ.

ಡಿ.ವಿ.ಗುಂಡಪ್ಪ–ಅವನೊಳಿರಿಸಿರ್ದೆನ್ ಆನ್ ಕುಂದಿರದ ನೆಚ್ಚಿಕೆಯ ಎಂದು ಹೇಳಿದ್ದನ್ನು ಶ್ರೀಕಂಠೇಶಗೌಡರು "ರಾಜದ್ರೋಹಿಯಾದ ಬರ್ಭರ ನನ್ನಗಲಿದ ಭಾಗ್ಯಲಕ್ಷ್ಮಿಯು ಮುಂದೆ ಧುರಧೀರನಾದ ವೀರಸೇನನನ್ನು ವರಿಸಿ ಬಾಳುವಳು" ಎಂದು ಪ್ರಯೋಗಿಸಿದ್ದಾರೆ. ಷೇಕ್ಸ್‌ಪಿಯರ್ ಡಂಕನ್‌ನಲ್ಲಿ ನೇರನಂಬಿಕೆಯನ್ನು ವ್ಯಕ್ತಪಡಿಸಿದರೆ, ತನ್ನಲ್ಲಿ ನಂಬಿಕೆ ಇಟ್ಟವರಲ್ಲಿ ವಿಜಯಧ್ವಜ ನಂಬಿಕೆ ಇಡುತ್ತಾನೆ. ಇಲ್ಲಿ ಡಿ.ವಿ.ಜಿ. ಅವರ ಅನುವಾದ ಹೆಚ್ಚು ನೇರವಿದೆ. ಶ್ರೀಕಂಠೇಶಗೌಡರ ಈ ಅನುವಾದ ಭಾಗ ಸ್ವತಂತ್ರಾನುವಾದಕ್ಕೆ ಸಾಕ್ಷಿ ಆಗಿದೆ.

## ವೀರಸೇನ

ಷೇಕ್ಸ್‌ಪಿಯರ್‌ನ ಮ್ಯಾಕ್ಬೆತ್ ಇಲ್ಲಿ ವೀರಸೇನನಾಗಿದ್ದಾನೆ. ವೀರಸೇನ ಒಬ್ಬ ದುರಂತನಾಯಕ. ಈತನ ದುರುದ್ದೇಶದಿಂದ ಕೂಡಿದ ಗುರಿಯೇ ಈತನ ಅತಿದೊಡ್ಡ ದೌರ್ಬಲ್ಯವಾಯಿತು. ಈತನ ಶಕ್ತಿಹೀನ ವಿವೇಚನಾಶಕ್ತಿ ಮತ್ತು ಮೂವರು ಮಾಟಗಾತಿಯರ ಮಾತುಗಳು, ಹೆಂಡತಿಯ ದುರಾಸೆ ಇವು ಈತನ ಅಂತ್ಯಕ್ಕೆ ನಾಂದಿ ಹಾಡಿತು. ವೀರಸೇನ ಸ್ವಭಾವತಃ ದುರಾತ್ಮನಲ್ಲ, ಖಳನಲ್ಲ, ಕ್ರೂರಿಯಲ್ಲ, ಹಿಂಸಾಮೋದಿಯಲ್ಲ, ನಿಜವಾಗಿ ಅವನೊಬ್ಬ ಎಣೆಯಿಲ್ಲದ ರಣಯೋಧ; ಆಳರಸನ ಮಟ್ಟಿಗೆ ವಿಧೇಯ; ನಂಬಿಕಸ್ಥ, ಅಪಾರ ಗೌರವಕ್ಕೆ ಒಡೆಯ"[6] ಇವನು ತನ್ನ ಜೀವನಯಾತ್ರೆಯನ್ನು ಅಪರಾಧಗಳನ್ನೆಸಗುತ್ತ ಶುರುಮಾಡಿದನು.

ಯುದ್ಧದ ವಿಜಯದ ನಂತರ ವೀರಸೇನ ಶೂರಸೇನನನ್ನು ಕುರಿತು "ದಯಾಳುಗಳೇ! ನಾನು ನಿಮ್ಮ ಶ್ರಮವನ್ನು ಮರೆಯತಕ್ಕವನಲ್ಲ." ಎನ್ನುತ್ತಾನೆ. ಶಕ್ತಿಗಳ ಮಾತಿನಲ್ಲಿ ನಂಜಿಕೆಯಿಟ್ಟಿರುವ ವೀರಸೇನ "ಸಂದೇಹ ದಿಗಿಲು ಆತಂಕ ಒಂದೂ ಇಲ್ಲದೆ ಮಗುವಿನಂತೆ ಮಲಗಿರುವ ವಿಜಯಧ್ವಜ(ಡಂಕನ್)ನನ್ನು ಚಾಕುವಿನಿಂದ ಇರಿದುಬಿಡುತ್ತಾನೆ."[7] ತನ್ನ ಆಸೆಯನ್ನು ಬೆನ್ನಟ್ಟಿದ ವೀರಸೇನ ಅಧಿಕಾರದ ಗದ್ದುಗೆ ಹಿಡಿಯುತ್ತಾನೆ. ಗದ್ದುಗೆ ಮೋಹ ಏನನ್ನಾದರೂ ಮಾಡಿಸುತ್ತದೆ ಎಂಬುದನ್ನು ಇಲ್ಲಿ ಕಾಣಬಹುದು. ಶೂರಸೇನನನ್ನು ಕೊಲೆಮಾಡಿಸಿದ ನಂತರದ ಬೆಳವಣಿಗೆಯಿಂದಾಗಿ ವೀರಸೇನ ಯಕ್ಷಿಣಿಯರನ್ನು ಕಾಣುವ ನಿರ್ಧಾರಕ್ಕೆ ಬರುತ್ತಾನೆ.

"ಇಲ್ಲಿ ವೀರಸೇನ ವ್ಯಕ್ತಿತ್ವದಲ್ಲಿ ಉಂಟಾಗಿರುವ ಬದಲಾವಣೆಯನ್ನು ಸೂಕ್ಷ್ಮವಾಗಿ ಅರಿಯಬಹುದಾಗಿದೆ. ಮೊದಲ ಸಲ ಇದೇ ಮಾಟಗಾತಿಯರನ್ನು ಕಂಡಾಗ ಮಾತನಾಡಲು ಅವರ ಸಲಹೆಗೆ ದಿಟ್ಟವಾಗಿ ಮುಂದಾಗಿದ್ದಾನೆ! 'ಕೆಟ್ಟ'ಸಹವಾಸ ಅವನಿಗೀಗ ಅಸಹ್ಯವಾದುದೇನಲ್ಲ! ಅದರ ನೆರವನ್ನಾದರೂ ಬಳಸಿಕೊಂಡು ಆರಂಭಿಸಿದ ಕೊಲೆಗಳ ಕಾರ್ಯವನ್ನು ಸಮಾಧಾನವನ್ನು ಹೊಂದುವಂತಹ ಘಟ್ಟಕ್ಕಾದರೂ ತಲುಪಿಸುವ ತವಕ"[8] ಈ ಬದಲಾವಣೆ ಆಗಲು ಮುಖ್ಯ ಕಾರಣ ಅಧಿಕಾರದ ಮದ ತಲೆಗೇರಿರುವುದೇ ಆಗಿದೆ.

ಶ್ರೀಕಂಠೇಶಗೌಡರು ಮ್ಯಾಕ್ಬೆತ್ತನ್ನು ಎರಡು ವಿಧವಾಗಿ ಅನುವಾದಿಸುತ್ತಾರೆ. ಮೂಲದಲ್ಲಿರುವುದನ್ನು ಯಥಾವತ್ತಾಗಿ ಕೆಲವೆಡೆ ಅನುವಾದಿಸಿದರೆ ಮತ್ತೆ ಕೆಲವೆಡೆ ನಮ್ಮ ಸಂಸ್ಕೃತಿಗೆ ಅನುಗುಣವಾಗಿ ಅನುವಾದಿಸುತ್ತಾರೆ. ಶತ್ರುಸೇನೆ ಹತ್ತು ಸಾವಿರ ಬರುತ್ತಿರುವ ಸುದ್ದಿ ತಿಳಿದಾಗ ಬರುತ್ತಿರುವವರು 'ಗೀಸ್' ಎನ್ನುತ್ತಾನೆ ಕವಿ ಮೂಲದಲ್ಲಿ ನೇರ ಪದಾನುವಾದದಲ್ಲಿ ಡಿ.ವಿ.ಜಿ, ಭಗವಾನರು 'ಬಾತುಕೋಳಿ' ಎಂದಿದ್ದಾರೆ. ಆದರೆ ಶ್ರೀಕಂಠೇಶಗೌಡರು 'ಗೂಬೆಗಳೇನೋ' ಎನ್ನುತ್ತಾರೆ. ಇತರರದು ಶಬ್ದಾನುವಾದರೆ ಶ್ರೀಕಂಠೇಶಗೌಡರದು ಭಾವಾನುವಾದವಾಗಿದೆ. ಷೇಕ್ಸ್‌ಪಿಯರ್ ಮ್ಯಾಕ್ಬೆತ್‌ನನ್ನು ತನ್ನ ನಾಯಕನನ್ನಾಗಿ ಮಾಡಿಕೊಂಡು ನಾಟಕಕ್ಕೆ ಅದೇ ಹೆಸರಿಟ್ಟಿದ್ದಾನೆ. ಆದರೆ ಶ್ರೀಕಂಠೇಶಗೌಡರು ಬದಲಿಸಿದ್ದಾರೆ.

## ಶೂರಸೇನ

ಷೇಕ್ಸ್‌ಪಿಯರ್‌ನ 'ಬ್ಯಾಂಕೊ' ಇಲ್ಲಿ ಶೂರಸೇನನಾಗಿದ್ದಾನೆ. ಶೂರಸೇನ ಒಬ್ಬ ಸೇನಾ ದಂಡನಾಯಕನಾಗಿ ಕಾಣಿಸಿಕೊಂಡಿದ್ದಾನೆ. ಮೊದಲ ದೃಶ್ಯದಲ್ಲಿ ಶಕ್ತಿಗಳ ಭೇಟಿಯಾದಾಗ ಈತನ ನೈತಿಕತೆ, ಮಾನಸಿಕ ಸಾಮರ್ಥ್ಯವು ವೀರಸೇನನಿಗಿಂತ ಹೆಚ್ಚಾಗಿರುವುದು ಕಂಡುಬರುತ್ತದೆ. ಜೀವನದಲ್ಲಿ ಹೆಚ್ಚಿನ ಸಕ್ರಿಯತೆ ಇಲ್ಲದಿದ್ದರೂ, ಈತನಿಗೆ

ತನ್ನ ಮೇಲೆ ಅತಿಯಾದ ವಿಶ್ವಾಸವಿದೆ. ವೀರಸೇನನಿಗೆ ಹಲವು ಸಂದರ್ಭಗಳಲ್ಲಿ ಸಲಹೆ ಸೂಚನೆಗಳನ್ನು ನೀಡಿದ್ದಾನೆ. ಶೂರಸೇನ ಒಬ್ಬ ದಕ್ಷ ಆಡಳಿತಗಾರನಾಗಿ ತನ್ನ ಸ್ವಾಮಿ ನಿಷ್ಠೆಯನ್ನು ತನ್ನ ರಾಜನಿಗೆ ತೋರಿಸಿದ್ದಾನೆ. ರಾಜ ವಿಜಯಧ್ವಜ ಚಂದ್ರವಲ್ಲಿಗಾಗಿ ಕೊಟ್ಟ ಮುಕ್ತಾಹಾರವನ್ನು ನಿಷ್ಠೆಯಿಂದ ತಂದು ಕೊಡುತ್ತಾನೆ. ವಿಜಯಧ್ವಜನ ಕೊಲೆಯಿಂದಾಗಿ ವೀರಸೇನ ರಾಜನಾಗಿ ಆಯ್ಕೆಯಾದಾಗ ಅವನ ಕಿರೀಟಧಾರಣೆ ಸಮಾರಂಭಕ್ಕೆ ಹೋಗುವುದಿಲ್ಲ ಈ ಮೂಲಕ ತಾನು ವೀರಸೇನನ ಕೃತ್ಯವನ್ನು ಪ್ರತಿಭಟಿಸುತ್ತಾನೆ. ಆದರೆ ಭೋಜನಕೂಟಕ್ಕೆ ತನ್ನ ಮಗನೊಂದಿಗೆ ಬರುವುದಾಗಿ ತಿಳಿದಿದ್ದರೂ, ವೀರಸೇನನ ಕುತಂತ್ರದಿಂದಾಗಿ, ದಾರಿ ಮಧ್ಯದಲ್ಲಿ ಕೊಲೆಗೀಡಾಗುತ್ತಾನೆ.

### ಜಯಸಿಂಹ

ಷೇಕ್ಸ್‌ಪಿಯರ್‌ನ 'ಮ್ಯಾಕ್‌ಢಫ್' ಇಲ್ಲಿ ಜಯಸಿಂಹನಾಗಿದ್ದಾನೆ. ಈತ ಬುದ್ಧಿವಂತ, ನ್ಯಾಯಪರ, ಸಜ್ಜನ, ಧೈರ್ಯಪುರುಷ, ಚಿಕ್ಕಪಾತ್ರವಾದರೂ ವೈಶಿಷ್ಟ್ಯದಿಂದ ಕೂಡಿದೆ. ಪರೋಕ್ಷವಾಗಿ ಈತ ವೀರಸೇನನನ್ನು ಕ್ರೂರಿ ಎಂಬುದಾಗಿ ಹೇಳುವುದರಲ್ಲಿ ಅಧೈರ್ಯನಲ್ಲ. ದೇಶದ ಬಗ್ಗೆ ಅಭಿಮಾನವಿಟ್ಟುಕೊಂಡ ಸ್ವಾಭಿಮಾನದ ವ್ಯಕ್ತಿ. ವಿಜಯಧ್ವಜನ ಕೊಲೆಯ ದೃಶ್ಯವನ್ನು ನೋಡಿ ಜಯಸಿಂಹನು ಗಾಬರಿಗೊಳ್ಳುತ್ತಾನೆ. ಮುಂದೆ ತನ್ನ ಹೆಂಡತಿ ಮಕ್ಕಳನ್ನು ವೀರಸೇನ ಕೊಲೆಮಾಡಿಸಿದಾಗ ಅವನ ಮೇಲೆ ಅಗಾಧವಾದ ಶತ್ರುತ್ವವನ್ನು ಬಳಸಿ ಕೊಳ್ಳುತ್ತಾನೆ. ಪ್ರತಾಪರುದ್ರದೇವನಿಗೆ ಸ್ಫೂರ್ತಿ, ಮಾರ್ಗದರ್ಶನ ಮತ್ತು ಸಲಹೆಗಳನ್ನು ನೀಡಿ ತನ್ನ ಕಾರ್ಯವನ್ನು ಸಾಧಿಸಿಕೊಳ್ಳುವ ಮಹಾನ್ ರಹಸ್ಯನಾಯಕನಾಗಿ ಕಂಡು ಬಂದಿದ್ದಾನೆ. ಕಡೆಗೆ ವೀರಸೇನನನ್ನು ಕೊಲೆ ಮಾಡುವ ಮೂಲಕ ತನ್ನ ಸೇಡನ್ನು ತೀರಿಸಿಕೊಳ್ಳುತ್ತಾನೆ.

### ಪ್ರತಾಪರುದ್ರದೇವ

ಷೇಕ್ಸ್‌ಪಿಯರ್‌ನ 'ಮಾಲ್ಕಮ್' ಇಲ್ಲಿ ಪ್ರತಾಪರುದ್ರದೇವನಾಗಿದ್ದಾನೆ. ವಯಸ್ಸಿನಲ್ಲಿ ಚಿಕ್ಕವನಾದರೂ, ದೊರೆಯ ಪ್ರಶ್ನೆಗೆ ಸುತ್ತುಬಳಸದ ತೀರನೇರವೂ ಅಲ್ಲದ, ಸಮರ್ಪಕ ಉತ್ತರ ಕೊಡುತ್ತಾನೆ. "ಬರ್ಭರನು ಶೂಲ ದಂಡನೆಯಿಂದ ಪ್ರಾಣ ಬಿಡುತ್ತಿದ್ದವನ ಕಂಡವನೊಂದಿಗೆ ನಾನು ಮಾತಾಡಿರುವೆನೆಂದು" ತಿಳಿಸುತ್ತಾನೆ. ಪ್ರತಾಪರುದ್ರದೇವ ಕುಶಾಗ್ರ ವ್ಯಕ್ತಿಯೂ, ತಾಳ್ಮೆಯಿಂದ ಪರಿಸ್ಥಿತಿಯನ್ನು ನಿಭಾಯಿಸುವ ಮನೋಭಾವದವನೂ ಆಗಿರುತ್ತಾನೆ. ಆದ್ದರಿಂದಲೇ ಅವನು ತನ್ನ ತಂದೆ ವಿಜಯಧ್ವಜನ ಕೊಲೆನಡೆದಾಗ, ಪ್ರಭುತ್ವದ ಮೇಲೆ ಪ್ರಯೋಗಿಸುವ ಬಾಣದಿಂದ ತಪ್ಪಿಸಿಕೊಳ್ಳುವ ತೀರ್ಮಾನವನ್ನು ತೆಗೆದುಕೊಳ್ಳುತ್ತಾನೆ. ಪಾಟಲೀಪುತ್ರಕ್ಕೆ ಹೋಗಿ ಮಗಧನೊಂದಿಗೆ ಚರ್ಚಿಸಿ, ಜಯಸಿಂಹನನ್ನು

ಭೇಟಿಮಾಡಿ ರಣತಂತ್ರ ರೂಪಿಸುತ್ತಾನೆ.

ಜಯಸಿಂಹನನ್ನು ಕುರಿತು "ಪತ್ನಿ ಪುತ್ರರನ್ನು ನೀನೇಕೆ ಬಿಟ್ಟುಬಂದೆ. ಅವರಲ್ಲಿರುವ ಆಸೆ ಪ್ರೇಮಗಳಿಗಿಂತಲು ಅಧಿಕವಾದುದು ಜಗತ್ತಿನಲ್ಲಿ ಮತ್ತಾವುದಿದೆ" ಎಂದು ಪ್ರಶ್ನಿಸುತ್ತಾನೆ. ನಾನು ಲೋಕದಲ್ಲಿರುವ ವಿಶಿಷ್ಟ ಅಪರಾಧಗಳನ್ನು ಸೇರಿಸಿ ಮಾಡಿರುವ ಮೂರ್ತಿಯೆಂದು ಆತ ಪರಿಚಯಿಸಿಕೊಳ್ಳುತ್ತಾನೆ. ನನ್ನಂಥವರು ಓಡ್ರವನ್ನಾಳಬಹುದೆ ಎಂದು ಪ್ರಶ್ನಿಸಿ, ಯುದ್ಧಕ್ಕೆ ಸಹಕರಿಸುವಂತೆ ಕೇಳಿಕೊಳ್ಳುತ್ತಾನೆ. ಹಾಗೆಯೇ ಮಗಧ ಸೈನ್ಯವು ಶೇಖರನೊಡನೆ ಓಡ್ರಕ್ಕೆ ಹೊರಡಲು ಸಿದ್ಧವಾಗಿತ್ತೆಂಬ ವಿಚಾರವನ್ನು ಜಯಸಿಂಹನಿಂದ ತಿಳಿಯುತ್ತಾನೆ. ಓಡ್ರದ ಕಡೆಗೆ ಸೈನ್ಯ ಹೊರಟಾಗ ಒಬ್ಬೊಬ್ಬರು ಒಂದೊಂದು ವಲ್ಲಭೆಯ ಕಾಡಿನ ಕೊಂಬೆಯನ್ನು ಕಡಿದು ಕೈಲಿ ಹಿಡಿದಿಕೊಂಡು ಕೋಟೆಯ ಬಳಿ ಸೈನಿಕರು ಪ್ರತಾಪರುದ್ರನಿಗೆ ಜಯತಂದುಕೊಡುತ್ತಾರೆ. ಎಲ್ಲಾ ಮಿತ್ರರೂ ಸುಖವಾಗಿ ಮರಳಲಿ ಎಂದು ಹೇಳುವ ಮೂಲಕ ತನ್ನ ಆಶಾಭಾವನೆ ವ್ಯಕ್ತಪಡಿಸುತ್ತಾನೆ. ಕೊನೆಗೆ ಪ್ರತಾಪರುದ್ರನಿಗೆ ಪಟ್ಟವಾಗುತ್ತದೆ. ಷೇಕ್ಸ್‌ಪಿಯರ್‌ನಲ್ಲಿ ಸಾಮಾನ್ಯ ಪಾತ್ರವಾಗಿದ್ದ ಈತನನ್ನು ಶ್ರೀಕಂಠೇಶಗೌಡರು ತನ್ನ ನಾಟಕದ ನಾಯಕನನ್ನಾಗಿ ಮಾಡಿಕೊಂಡಿದ್ದಾರೆ. ಭಾರತೀಯ ಸಂಸ್ಕೃತಿಯಲ್ಲಿ ತಂದೆಯ ಸಾವಿನ ನಂತರ ಹಿರಿಯ ಮಗನಿಗೆ ಅಧಿಕಾರ ಸಿಗಬೇಕೆಂಬ ತತ್ವಕ್ಕೆ ಬದ್ಧವಾಗಿರುವ ಗೌಡರು ಈ ಪಾತ್ರಕ್ಕೆ ಜೀವ ತುಂಬಿದ್ದಾರೆ.

## ಚಂದ್ರವಲ್ಲಿ

ಷೇಕ್ಸ್‌ಪಿಯರ್‌ನ 'ಲೇಡಿ ಮ್ಯಾಕ್ಬೆತ್' ಇಲ್ಲಿ ಚಂದ್ರವಲ್ಲಿಯಾಗಿದ್ದಾಳೆ. ಇವಳೊಬ್ಬಳು ಮಹತ್ವಾಕಾಂಕ್ಷೆವುಳ್ಳವಳು. ಆದರೆ ಇವಳ ಗುರಿ ಮತ್ತು ಆಕಾಂಕ್ಷೆಗಳು ಈಕೆಯ ಗಂಡನ ಪರವಾಗಿದ್ದವು. ಈ ನಾಟಕದಲ್ಲಿನ ದುರಂತಕ್ಕೆ ಕಾರಣವಾದ ವ್ಯಕ್ತಿತ್ವ ಇವಳದು. ತನ್ನ ಕಾರ್ಯವನ್ನು ಶ್ರದ್ಧೆಯಿಂದ ತನ್ನಿಂದ ಸಾಧ್ಯವಾದಷ್ಟು ಸಾಧಿಸಲು ಯತ್ನಿಸುವಳು. "ತನ್ನ ಪತಿಗಿಂತಲೂ ತಾನೇ ಕೆಲವೊಂದು ವಿಚಾರಗಳಲ್ಲಿ ಚಾಣಾಕ್ಷೆ, ಬುದ್ಧಿವಂತೆ, ಸಂದರ್ಭವನ್ನರಿತು ವೇಷಕಟ್ಟಿಕೊಂಡು ಕೆಲಸವನ್ನು ಸಾಧಿಸಬಲ್ಲಳು."[9] ಪತಿಯ ಪತ್ರದ ವಿಚಾರಗಳಿಂದಾಗಿ ಇವಳ ಮಹತ್ವಾಕಾಂಕ್ಷೆ ಗಟ್ಟಿಗೊಳ್ಳುತ್ತದೆ. ರಾಣಿಲೋಕದ ಕಲ್ಪನೆಯಲ್ಲಿ ಮಿಂದು ಹೋಗುತ್ತಾಳೆ.

ವೀರಸೇನನನ್ನು ಅಭಿಮಾನದಿಂದ ಬರಮಾಡಿಕೊಂಡು ಪತಿಗೆ "ನಿನ್ನ ಕಣ್ಣುಗಳಲ್ಲಿ ಸ್ವಾಗತವು ಸೂಸಲಿ, ಕೈನಾಲಿಗೆಗಳು ತಡೆಗೊಳ್ಳದಿರಲಿ, ಏನೂ ತಿಳಿಯದ ಪ್ರಶಾಂತ ಪುಷ್ಪದಂತೆ ತೋರಿಸಿಕೊಂಡು ಅದರಡಿಯಲ್ಲಿನ ಘೋರ ಸರ್ಪವಾಗಿರು"[10] ಎಂದು ಸಲಹೆ ನೀಡುತ್ತಾಳೆ ಹೆಂಡತಿಯ ಸ್ಫೂರ್ತಿಯಿಂದ ರಾಜನನ್ನು ಕೊಂದ ವೀರಸೇನ ಕಠಾರಿಯನ್ನು ಜೊತೆಯಲ್ಲಿ ತಂದಾಗ, ಅವನನ್ನು ಬೈದು ಚಂದ್ರವಲ್ಲಿಯೇ ಕಠಾರಿಯನ್ನಿಡಿದು

ರಕ್ತವನ್ನು ಕಾವಲುಗಾರರಿಗೆ ಹಚ್ಚಿ ಕಠಾರಿಯನ್ನು ಅವರು ಪಕ್ಕದಲ್ಲಿಟ್ಟು ಬರುತ್ತಾಳೆ. ಚಂದ್ರವಲ್ಲಿ ಸಮಯಸ್ಫೂರ್ತಿಯಿರುವ ಚತುರೆ ಮತ್ತು ಧೈರ್ಯವಂತೆ ಎಂಬುದು ಈ ಪ್ರಸಂಗದಲ್ಲಿ ವ್ಯಕ್ತವಾಗಿದೆ. ಬೆಳಿಗ್ಗೆ ರಾಜನ ಕೊಲೆ ವಿಚಾರ ಉಪರಾಜರಿಗೆ ತಿಳಿದಾಗ ಏನನ್ನು ತಿಳಿಯದವಳಂತೆ ನಾಟಕಮಾಡಿ ದುಃಖಪಡುತ್ತಾಳೆ. ಗುಟ್ಟನ್ನು ಬಿಟ್ಟುಕೊಡದ ಜಾಣ್ಮೆ ಇಲ್ಲಿ ಕಾಣುತ್ತದೆ. ವೀರಸೇನ ರಾಜಮಂಡಲಕ್ಕೆಲ್ಲ ಔತಣಕೂಟವನ್ನೇರ್ಪಡಿಸಿದ್ದಾನೆ. ಸಂಭ್ರಮದಿಂದ ಆಹ್ವಾನಿತರನ್ನು ಉಪಚರಿಸುತ್ತಾಳೆ. ಪತಿ ಪ್ರೇತಕ್ಕೆ ಭಯಪಟ್ಟು ವರ್ತಿಸಿದಾಗ ಪತಿಯನ್ನು ಬೈದು, ಅತಿಥಿಗಳನ್ನು ಪದ್ಧತಿಯನ್ನನುಸರಿಸದೆ ಜಾಗ್ರತೆಯಿಂದ ಪ್ರಯಾಣ ಬೆಳಿಸಿರೆಂದು ವಿನಂತಿಸಿಕೊಳ್ಳುತ್ತಾಳೆ. ದಿಟ್ಟೆಯಾದ ಚಂದ್ರವಲ್ಲಿ ಈ ಅನಿರೀಕ್ಷಿತ ಪರಿಸ್ಥಿತಿಯನ್ನು ಎದುರಿಸುವಲ್ಲಿ ಆಕೆಯ ಕಾರ್ಯಕೌಶಲ್ಯವನ್ನು ಗಮನಿಸಬಹುದು. "ಇದೇನು! ಶುದ್ಧ ಹುಚ್ಚನಾದೆ." ಎಂದು ಉದ್ಗರಿಸುತ್ತಾಳೆ. ಚಂದ್ರವಲ್ಲಿ ವೀರಸೇನನ ಶಯನಗೃಹದಲ್ಲಿ ಪ್ರಜ್ಞಾಹೀನ ಸ್ಥಿತಿಯಲ್ಲಿ ವಿಚಿತ್ರವಾಗಿ ವರ್ತಿಸುತ್ತಾಳೆ. ತನ್ನ ಕೈಗಳನ್ನು ತೊಳೆದುಕೊಳ್ಳುವಂತೆ ನಟಿಸುತ್ತ ಅಸಹ್ಯಕಲೆಯೆ ತೊಲಗು, ವೃದ್ಧನಲ್ಲಿಷ್ಟೊಂದು ರಕ್ತವಿತ್ತೆಂದು ಯಾರು ತಿಳಿದಿದ್ದರೆಂದು ತಾನೊಬ್ಬಳೆ ಮಾತನಾಡಿಕೊಳ್ಳುತ್ತಾಳೆ. "ಫೈಪಿನ ಮಾಂಡಲಿಕನಿಗೆ ಒಬ್ಬ ಹೆಂಡತಿ ಇದ್ದಳು. ಈಗ ಅವಳೆಲ್ಲಿ? ಏನು ಈ ಕರಗಳು ಶುಭ್ರವಾಗುವುದೇ ಇಲ್ಲವೇ ಸಾಕಿನ್ನು ನನ್ನ ದೊರೆ ಸಾಕಿನ್ನು ನಿನ್ನ ಗಾಬರಿಯಿಂದ ಎಲ್ಲವನ್ನು ಕೆಡಿಸುತ್ತಿರುವೆ.[11] ಎಂದು ನಡೆದ ಹೀನ ಸಂಗತಿಗಳನ್ನು ಮೆಲುಕು ಹಾಕುತ್ತಾಳೆ. ಮಾನಸಿಕ ರೋಗಕ್ಕೆ ಗುರಿಯಾದ ಚಂದ್ರವಲ್ಲಿ ಕಡೆಗೆ ಸಾವಿಗೆ ಶರಣಾಗುತ್ತಾಳೆ.

### ಶಕ್ತಿಗಳು (ಮಾಟಗಾತಿಯರು)

ಷೇಕ್ಸ್‌ಪಿಯರ್‌ನ 'ಮಾಟಗಾತಿಯರು' ಇಲ್ಲಿ ಶಕ್ತಿಗಳಾಗಿ ಕಾಣಿಸಿಕೊಂಡಿದ್ದಾರೆ. ಯಕ್ಷಿಣಿಯು ಇವರ ಯಜಮಾನಿ, ಮೂಲದಲ್ಲಿ ಇವಳು 'ಹೆಕೇಟ್' ಆಗಿ ಗುರುತಿಸಿಕೊಂಡಿದ್ದಾಳೆ. ನಾಟಕದ ಆರಂಭದಲ್ಲಿ ಶಕ್ತಿಗಳು ಭೇಟಿಯಾಗಿ, ಮುಂದಿನ ಭೇಟಿಯ ಸ್ಥಳವನ್ನು ನಿಗದಿ ಮಾಡಿಕೊಳ್ಳುತ್ತಾರೆ. ಯುದ್ಧದ ಯಶಸ್ಸಿನಲ್ಲಿ ಮರಳುತ್ತಿದ್ದ ವೀರಸೇನನನ್ನು 'ವಲ್ಲಭಾಧಿಪತಿ' 'ಬರ್ಭರಾಧಿಪತಿ', ಎಂದೆಲ್ಲ ಕರೆದು ಅವನಲ್ಲಿ ಆಸೆಹುಟ್ಟಿಸಿ, ಸ್ವಲ್ಪ ಹೊತ್ತಿನಲ್ಲಿಯೇ ಮಾಯವಾಗುತ್ತವೆ. ಅತಿಮಾನುಷ ಶಕ್ತಿಗಳ ಭೀಕರತೆ ಇಲ್ಲಿ ಕಾಣಿಸಿಕೊಂಡಿದೆ ವೀರಸೇನ ಇವುಗಳಲ್ಲಿ ನಂಬಿಕೆ ಬೆಳಸಿಕೊಳ್ಳುತ್ತಾನೆ, ಶೂರಸೇನ ಇವುಗಳನ್ನು ಭೂಮಿಯ ಮೇಲಿನ ಗುಳ್ಳೆಗಳೆಂದು ಭಾವಿಸುತ್ತಾನೆ. ನಾಲ್ಕನೇ ಅಂಕದ ಆರಂಭದಲ್ಲಿ ಕತ್ತಲೆಯ ಗವಿಯೊಳಗೆ ಒಂದು ಬಾನಿಯಲ್ಲಿ ಹಲವು ಬಗೆಯ ವಿಚಿತ್ರವಾದ ಭಕ್ಷ್ಯಗಳನ್ನು ಸಿದ್ಧಪಡಿಸುತ್ತಿದ್ದಾರೆ. ವೀರಸೇನ ಇವರನ್ನು ಭೇಟಿಯಾಗಲು ಬರುತ್ತಾನೆ. ಶೂರಸೇನನ ಸಂತಾನಕ್ಕೆ ರಾಜ್ಯ ಪದವಿ ಸಿಗುವುದೇ? ಎಂದು ವೀರಸೇನ ಪ್ರಶ್ನಿಸಿದಾಗ ಶಕ್ತಿಗಳು ನೀನು ಇದುವರೆಗೆ ತಿಳಿದುದಕ್ಕಿಂತ ಹೆಚ್ಚಾಗಿ ತಿಳಿಯಲು ಪ್ರಯತ್ನಿಸಬೇಡವೆಂದು ಎಚ್ಚರಿಸುತ್ತವೆ. ನಾಟಕದ ಬೆಳವಣಿಗೆಯಲ್ಲಿ ಶಕ್ತಿಗಳು ಪ್ರಮುಖ ಪಾತ್ರ ವಹಿಸುತ್ತವೆ.

# IV. "ಪ್ರತಾಪರುದ್ರದೇವ" ನಾಟಕದ ಭಾಷಾಶೈಲಿ ಮತ್ತು ಛಂದಸ್ಸು

ಪ್ರತಿಯೊಂದು ಕೃತಿಯೂ ಕೃತಿಕಾರನ ಕಾಲ, ದೇಶ ಜೀವನಾನುಭವ ಮತ್ತು ಕೃತಿಯ ವಸ್ತುವಿಗೆ ಅನುಗುಣವಾಗಿ ಭಾಷಾಪ್ರಯೋಗಗಳನ್ನು ಹೊಂದಿರುತ್ತವೆ. ಅದರಂತೆ ಶ್ರೀಕಂಠೇಶಗೌಡರು ಮೈಸೂರು, ಮಂಡ್ಯ, ಬೆಂಗಳೂರಿನಲ್ಲಿ ವಾಸವಿದ್ದವರು. ಸಮಾಜದ ಉನ್ನತ ವರ್ಗದಲ್ಲೂ, ಹಳ್ಳಿಯ ಜನರೊಡನೆಯೂ ಸಂಪರ್ಕ ಹೊಂದಿದ್ದರು. ಹೀಗಾಗಿ ಅವರ ಕೃತಿಗಳಲ್ಲಿ ಶಿಷ್ಟ ಭಾಷೆ–ಗ್ರಾಮ್ಯ ಭಾಷೆಗಳೆರಡರ ಸಂಮಿಶ್ರಣ ಕಾಣುತ್ತೇವೆ. ಪದ ಸಂಪತ್ತು ಒಂದು ಕೃತಿಯ ರಚನೆಯಲ್ಲಿ ಮಹತ್ವದ ಪಾತ್ರ ವಹಿಸುತ್ತದೆ. ಪಾತ್ರಗಳಿಗೆ ತಕ್ಕಂತೆ ಭಾಷೆಬಳಕೆ ಆಗುತ್ತದೆ. ನಾಟಕಕಾರನಿಗೆ ಭಾಷಾಪ್ರಭುತ್ವ ಇಲ್ಲದಿದ್ದರೆ ಕೃತಿಯಲ್ಲಿ ಪಾತ್ರಗಳ ಮಾತಿನಲ್ಲಿ ಆಭಾಸ ಕಾಣುತ್ತೇವೆ. ಗ್ರಾಮ್ಯಭಾಷೆ ಶಿಷ್ಟದಲ್ಲಾಗಲಿ. ಶಿಷ್ಟಭಾಷೆ ಗ್ರಾಮ್ಯದಲ್ಲಾಗಲಿ ಬಂದರೆ ಆಭಾಸವಾಗುವುದು ಖಂಡಿತ. ಶ್ರೀಕಂಠೇಶಗೌಡರ ನಾಟಕದಲ್ಲಿ ಔಚಿತ್ಯಪೂರ್ಣವಾಗಿ ಶಿಷ್ಟ–ಗ್ರಾಮ್ಯ ಭಾಷೆಗಳ ಬಳಕೆ ಆಗಿರುವುದನ್ನು ಕಾಣಬಹುದು.

**1.(ಅ) ಗ್ರಾಮೀಣಭಾಷಾ ಬಳಕೆ**

ಶ್ರೀಕಂಠೇಶಗೌಡರು ಮೂಲತಃ ಮಂಡ್ಯಜಿಲ್ಲೆಯ ದೇಶಹಳ್ಳಿಯ ಗ್ರಾಮ ಜೀವನದ ನೆಲೆಯಿಂದ ಬಂದವರಾಗಿದ್ದು, ಗ್ರಾಮದ ಜೀವನ ಮತ್ತು ಅಲ್ಲಿಯ ಭಾಷೆಯನ್ನು ಅತೀ ಹತ್ತಿರದಿಂದ ನೋಡಿದ್ದರು ಮತ್ತು ಅನುಭವಿಸಿದ್ದರು. ಈ ಕಾರಣದಿಂದಾಗಿಯೇ ಅವರ ಎಲ್ಲಾ ಕೃತಿಗಳಲ್ಲೂ ಮೂಲದಲ್ಲಿ ಇಲ್ಲದ ಹಲವು ಮಂಡ್ಯ ಜಿಲ್ಲೆಯ ಗ್ರಾಮ್ಯಪದಗಳು ಅರ್ಥಪೂರ್ಣವಾಗಿ ಪ್ರಯೋಗಗೊಂಡಿವೆ.

**ಉದಾಹರಣೆಗೆ–** ತಿರಗ(ಪುಟ 23) ಚಟ್ಟ (23) ತಿರೆಯ(26) ಮಲುಕು(27) ಊನವಿರಲಿಲ್ಲ(44) ಹೊರ್ತು(46) ಅಗ್ಣಿ (49) ದಿಮ್ಮಾಗೆ(49) ತೆಳ್ತಿಯೆ(49) ಹಾಕಿವ್ನಿ(49) ನಮ್ದು(50) ಸತ್ತವ್ನೆ(50) ಒಳ್ಳೇದು(53) ಹ್ಯಾಗೆ(62) ಮುಚ್ಚಂಜೆ(66) ಒಂದಾವೃತ್ತಿ(66) ಇದನ್ಯಾರು(68) ಔತಿರುವನು(74) ಜೈಸಲು(88) ಆಚೆಗೆ(103) ಮೇಗಳಿಂದ(109)

**ಆ) ಸಂಸ್ಕೃತ ಪದಗಳು**

ಸಂಸ್ಕೃತ ಕನ್ನಡ ಭಾಷೆಯ ಪೋಷಕ ಭಾಷೆಯಾಗಿದ್ದು, ಸಾಕುತಾಯಿಯಂತೆ ಕನ್ನಡವನ್ನು ಬೆಳೆಸಿದೆ ಎಂಬುದರಲ್ಲಿ ಎರಡು ಮಾತಿಲ್ಲ. ಸಂಸ್ಕೃತ–ಕನ್ನಡ ಭಾಷೆಗಳ ಮಧುರ ಸಂಯೋಗ ಆಗಿರುವುದನ್ನು ನಾವು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಉದ್ದಕ್ಕೂ ಗಮನಿಸಬಹುದು. ಆಂಡಯ್ಯನ 'ಕಬ್ಬಿಗರ ಕಾವ' ಒಂದು ಅಪವಾದ ಅಷ್ಟೆ ಶ್ರೀಕಂಠೇಶಗೌಡರ 'ಪ್ರತಾಪರುದ್ರದೇವ' ಕೃತಿಯಲ್ಲಿ ಗ್ರಾಮ್ಯ ಭಾಷೆಯ ಬಳಕೆಯಷ್ಟೇ ಸಂಸ್ಕೃತ ಪದ ಪ್ರಯೋಗಗಳನ್ನು ಕಾಣಬಹುದು. ಶ್ರೀಕಂಠೇಶಗೌಡರು ಸಂಸ್ಕೃತದ ಮೇಲೆ ಸಾಕಷ್ಟು

ಪ್ರಭುತ್ವ ಇರುವುದಕ್ಕಿಂತ ವ್ಯಾಮೋಹ ಇರುವುದನ್ನು ಕಾಣುತ್ತೇವೆ. ಎಷ್ಟೋ ಕಡೆ ಅನವಶ್ಯಕವಾಗಿ ಸಂಸ್ಕೃತ ಬಳಸುತ್ತಾರೆ. ಕನ್ನಡ ಗೊತ್ತಿಲ್ಲವೆಂದಲ್ಲ, ಗೊತ್ತಿದ್ದರೂ ಬಳಸುತ್ತಾರೆ. **ಉದಾಹರಣೆಗೆ:-** ನಿಷ್ಕ್ರಾಂತಾಃ ಸರ್ವೇ (ಪುಟ-23) ನಿಷ್ಕ್ರಾಂತಾಃ (34), ನಿಷ್ಕ್ರಾಂತೌ (ಪುಟ-37) ಜಯತು(29) ಪ್ರಕೃತ(29), ಅವಸಾನ(33) ಹರಣ(36) ಸುಫಲ(39) ಜಾತ್ಯತ್ವ(55) ಉತ್ಸವಭಂಗ(70) ತಿಲೋದಕ(84) ಅನೃತ(93) ಅಶ್ವಬಲ(104) ದಿಕ್ತಟ(110) ಸಮಾಪ್ತಂ(118) ಇತ್ಯಾದಿ.

**ಇ) ಜೋಡುನುಡಿಗಳು**

"ಜೋಡುನುಡಿಗಳು ಎಲ್ಲ ಭಾಷೆಗಳಲ್ಲಿಯೂ ಇರುವುದುಂಟು. ಆಡಿದ ಮಾತಿಗೆ ಜೋರು ಬರುವುದಕ್ಕಾಗಿ ಈ ಬಗೆಯ ಮಾತಿನ ರೀತಿಯು ಭಾಷೆಯಲ್ಲಿ ತಲೆದೋರುತ್ತದೆ."[12] ಇಂತಹ ಜೋಡುನುಡಿಗಳು ಸಾಹಿತ್ಯದಲ್ಲಿ ಸಾಮಾನ್ಯವಾಗಿ ಬಳಕೆಯಾಗುತ್ತವೆ. ಭಾಷೆಯಲ್ಲಿನ ಸೊಬಗನ್ನು ಹೆಚ್ಚಿಸಲು ಸಹಜವಾಗಿ ಜೋಡುನುಡಿಗಳನ್ನು ಬಳಸಲಾಗುತ್ತದೆ. ಶ್ರೀಕಂಠೇಶಗೌಡರ ಪ್ರತಾಪರುದ್ರದೇವ ಕೃತಿಯಲ್ಲಿಯು ಈ ಕೆಳಗಿನ ಕೆಲವು ಜೋಡುನುಡಿಗಳನ್ನು ಕಾಣಬಹುದು. **ಉದಾಹರಣೆಗೆ-** ಪಂದಿಗಿಂದಿ (ಪುಟ-26) ಹೆಂಡಗಿಂಡ(27) ತಂತಿಗಿಂತಿ(27) ಹಾಸ್ಗೆಗೀಸ್ಗೆ(49) ಎತ್ತಿಗಿತ್ತಿ(49) ಬಾಗಲ್ಗೆಗೀಗಲ್ಗೆ(49)

**(ಈ) ದ್ವಿರುಕ್ತಿ**

ವೀಪ್ಸೆ ಅಥವಾ ಆಮ್ರೇಡಿತ ಅಥವಾ ದ್ವಿರುಕ್ತಿ ಅಥವಾ ಬಹೂಕ್ತಿಯೆಂಬುದು ಜೋಡುನುಡಿಯ ಒಂದು ಪ್ರಕಾರವೆನ್ನುತ್ತಾರೆ. ಶಂಬಾ ಜೋಶಿಯವರು ದ್ವಿರುಕ್ತಿ, ಎಂದರೆ "ದೂರ, ಹತ್ತಿರ, ಸಿಟ್ಟು, ಹಗೆತನ, ಹೊಟ್ಟೆಕಿಚ್ಚು, ಗಡಿಬಿಡಿ, ಹೊಗಳಿಕೆ ತೆಗಳಿಕೆ ಎಂಬವೇ ಮೊದಲಾದ ಬಗೆಬಗೆಯ ಮನೋಭಾವನೆಗಳನ್ನು ವ್ಯಕ್ತಪಡಿಸುವಾಗ ಒಂದು ನುಡಿಯೆ ಎರಡು, ಕೆಲಸಾರೆ ಎರಡಕ್ಕಿಂತ ಹೆಚ್ಚು ಬಾರಿ ಬರುವುದು."[13] ಎಂದಿದ್ದಾರೆ. ದ್ವಿರುಕ್ತಿ ಭಾಷೆಯಲ್ಲಿನ ಕ್ರಿಯೆಗೆ ತೀವ್ರತೆಯನ್ನು ಕೊಡಲು ಬಳಸಲಾಗುತ್ತದೆ. ಸಂವಹನದ ಅನುಮಾನವಿದ್ದಾಗ, ಭಾವನಾತ್ಮಕವಾಗಿ ಚಿತ್ರಣವನ್ನು ಕೊಡುವಾಗ, ದ್ವಿರುಕ್ತಿ ಸಹಜವಾಗಿ ಬಳಕೆಯಾಗುತ್ತವೆ. ಪ್ರತಾಪರುದ್ರದೇವದಲ್ಲಿಯೂ ಕೆಲವು ದ್ವಿರುಕ್ತಿಗಳನ್ನು ಕಾಣಬಹುದು. **ಉದಾಹರಣೆಗೆ-** ಸಂಭ್ರಮಕ್ಕೆ-ಕಂಡಕಂಡ(ಪುಟ27) ಕೂರಿಕೂರಿ(68), ಬಾಧೆಗೆ-ಐಯ್ಯೋ! ಐಯ್ಯೋ!(49) ಸಿವಸಿವ(52), ಆವೃತ್ತಿಗೆ-ಈಜೀಜಿ(61)

ಶ್ರೀಕಂಠೇಶಗೌಡರು ಗ್ರಾಮ ಜೀವನದಿಂದ ಬಂದವರಾಗಿದ್ದು ಸಂಸ್ಕೃತ, ಇಂಗ್ಲಿಷ್ ಮತ್ತು ಕನ್ನಡ ಭಾಷೆಗಳಲ್ಲಿ ಪಾಂಡಿತ್ಯ ಪಡೆದವರಾಗಿದ್ದು ಭಾಷಾ ಪರಿಚಯ ಅನುವಾದದ ಹೊತ್ತಿನಲ್ಲಿ ಸಹಜವಾಗಿಯೇ ಇವು ಕೃತಿಗಳ ಮೇಲೆ ಪ್ರಭಾವ ಬೀರುವುದನ್ನು ಅವರ ಭಾಷಾ ಪ್ರಯೋಗಗಳಿಂದ ಕಾಣಬಹುದು.

## 2) ವಾಕ್ಯರಚನಾ ಶೈಲಿ

ನವೋದಯ ಪೂರ್ವದಲ್ಲಿ ಪ್ರಮುಖ ಅನುವಾದಕರಾಗಿದ್ದ ಶ್ರೀಕಂಠೇಶಗೌಡರು ಹಳಗನ್ನಡದಲ್ಲಿ ವಿಶೇಷ ಅಧ್ಯಯನದ ಆಸಕ್ತಿ ಹೊಂದಿದ್ದು ಹಳಗನ್ನಡದಿಂದ ಸಂಪೂರ್ಣವಾಗಿ ಹೊಸಗನ್ನಡಕ್ಕೆ ಹೊರಬರಲಾಗಲಿಲ್ಲ. ಇದಕ್ಕೆ ಇನ್ನೊಂದು ಕಾರಣ ಆ ಕಾಲದಲ್ಲಿ ಸಂಸ್ಕೃತ ಪಂಡಿತರಾದ ಕನ್ನಡ ಸಾಹಿತಿಗಳೇ ನಾಟಕಗಳ ರಚನೆಗೆ ತೊಡಗಿದ್ದು, ಸಂಸ್ಕೃತಭೂಯಿಷ್ಠ ಶೈಲಿಯನ್ನು ಬಳಸುತ್ತಿದ್ದರು. ಅವರ ಮಾದರಿ ಅನುಸರಿಸಿದ್ದರಿಂದ ಇವರ ನಾಟಕಗಳಲ್ಲೂ ಸಂಸ್ಕೃತದ ಬಳಕೆ ಅಧಿಕವಾಗಿರುವುದನ್ನು ಕಾಣಬಹುದು.

### ಅ) ಸಂಸ್ಕೃತ ಬಳಕೆ

ಸಂಸ್ಕೃತ ಪಾಂಡಿತ್ಯ ಗಳಿಸಿದ್ದ ಇವರಿಗೆ ಸಂಸ್ಕೃತ ಭೂಯಿಷ್ಠವಾದ ಸಮಾಸ ಪದಗಳ ಬಳಕೆ ಸಹಜವಾಗಿತ್ತು ಎಂಬುದನ್ನು ನಾಟಕದಲ್ಲಿ ಬಳಕೆಯಾದ ಅನೇಕ ಕೆಲವು ಸಮಾಸ ಪದಗಳಿಂದ ಗಮನಿಸಬಹುದು. **ಉದಾ–** ಸಂತೋಷತರಂಗಮಾಲೆಗಳು (ಪುಟ34) ಸುಲಭಮಾರ್ಗಾವಲಂಬನಂಗೈವನಲ್ಲ(35) ಚಂದ್ರನಸ್ತಾಚಲವನ್ನಲಂಕರಿಸಿರುವನು(43) ಇತ್ಯಾದಿ.



### ಆ) ಹಳಗನ್ನಡ ಬಳಕೆ

ಶ್ರೀಕಂಠೇಶಗೌಡರು ಹಳಗನ್ನಡವನ್ನು ಚೆನ್ನಾಗಿ ಕಲಿತಿದ್ದರು. ಕಂದ ವೃತ್ತರಚನೆಗಳಲ್ಲಿ ಪಳಗಿದ್ದರು. ಆ ಕಾಲದ ಹಳಗನ್ನಡ ಪಂಡಿತರ ಪ್ರಭಾವ ಅವರ ಮೇಲಿತ್ತು. ಇದರಿಂದ ಹಳಗನ್ನಡದ ಪ್ರಯೋಗಗಳನ್ನು ಅವರ ಕೃತಿಗಳಲ್ಲಿ ಸಾಕಷ್ಟು ಕಾಣುತ್ತೇವೆ. ––ನಿನ್ನ ಪಡಂಗುಗೆ ನಾನೊರ್ ಗಾಳಿಯೊವೆಂ (ಪುಟ–27) ಆವಂ ಮನೆಗೆ ಬರ್ಪಾಗವನ ಪಡಂಗು ಒಡೆದು ಪೋದುದು(28) ಜಯಿಕೆ ವೀರಸೇನಂ ಜಯಿಕೆ ಬರ್ಭರಾಧಿಪಂ(29) ವೀರಸೇನನಿಗಿಂತಲ್ಪಂ ಅವಂಗಧಿಕಂ ಬೋಧಿಸಿದವನಂ(39) ಸಂಕೀರ್ಣವಾಕ್ಯಗಳು ಕಾವ್ಯದ ಮಹತ್ವವನ್ನು ಹೆಚ್ಚಿಸಲು ಸಹಕಾರಿಯಾಗಬಲ್ಲವು. ಇಲ್ಲಿಯೂ ಕೂಡ ಕೆಲವು ಸಂಕೀರ್ಣ ವಾಕ್ಯಗಳನ್ನು ಗುರುತಿಸಬಹುದು–

ತನ್ನೊಂಭತ್ತು ಮರಿಗಳು ಮೆಲ್ದಪಂದಿರಕ್ತದರ್ಘ್ಯವನ್ನೀ
ಶೂಲದಲ್ಲೊಣಗಿದವನ ನೆಣಮಂ ಬೆಂಕಿಗಾಹುತಿಯನ್ನೀ (ಪುಟ–79)

### (ಇ) ಸರಳ–ಸಂಕೀರ್ಣ ದೀರ್ಘ ವಾಕ್ಯಗಳ ಸಂಮಿಶ್ರಣ

ನಾಟಕ ಸಂಭಾಷಣೆಯ ಸಂದರ್ಭದಲ್ಲಿ ಸರಳ ವಾಕ್ಯ, ಸಂಕೀರ್ಣ ವಾಕ್ಯ

ರಚನೆಗಳಲ್ಲಿ ಕಥೆಯನ್ನು ಬೆಳಸಬಲ್ಲರು. ಇಂತಹ ಹಲವು ಪ್ರಯೋಗಗಳು ಇಲ್ಲಿವೆ.

**ಸರಳ ವಾಕ್ಯಗಳು:**–1ನೇ ಶಕ್ತಿ – ತಂಗಿ! ನೀನೆಲ್ಲಿರ್ದೆ?
2ನೇ ಶಕ್ತಿ – ಪದಿಗಿಂದಿ ಕೊಲ್ಲುತ್ತಿರ್ದೆ?
3ನೇ ಶಕ್ತಿ – ಅಕ್ಕ! ನೀನೆಲ್ಲಿರ್ದೆ?(ಪುಟ–26)

**ಸಂಕೀರ್ಣವಾಕ್ಯ:**– ವೀರಸೇನ–ಕೈಲಾದ ಮಟ್ಟಿಗೆ ನಾನೆ ನಿಮಗಾತಿಥ್ಯವನ್ನು ಮಾಡುವೆ. ಅರಸಿಯೂ ಸಕಾಲದಲ್ಲಿ ನಿಮ್ಮನ್ನಾದರಿಸುವಳು. ಚಂದ್ರದಲ್ಲಿ–ಮಿತ್ರಮಂಡಲಿಗೆಲ್ಲ ಸ್ವಾಗತ. ಸಂತೋಷಾಧಿಕ್ಯದಿಂದ ಮಾತನಾಡಲು ಅವಕಾಶವಿಲ್ಲ.(ಪುಟ–66).

**ದೀರ್ಘ ಸಂಭಾಷಣೆ:**– ವೀರಸೇನ–ಹೌದು ನೀವು ಮನುಷ್ಯರೆಂಬುದು ನಿಜ.– – – – – – – – – – – – – – – – – – ನೀವು ನನ್ನ ಅನುರಾಗಕ್ಕೆ ಸದಾ ಪಾತ್ರರಾಗಿರುವಿರಿ (ಪುಟ–61) ಇಲ್ಲಿ 12 ಸಾಲಿನ ಸಂಭಾಷಣೆಯನ್ನು ಗುರುತಿಸಬಹುದು.

**3) ಪ್ರತಾಪರುದ್ರದೇವದ ಛಂದಸ್ಸು**

ಶ್ರೀಕಂಠೇಶಗೌಡರು ಷೇಕ್ಸ್‌ಪಿಯರ್‌ನ 'ಮ್ಯಾಕ್ಬೆತ್' ನಾಟಕವನ್ನು ರೂಪಾಂತರಿಸುವ ಸಂದರ್ಭದಲ್ಲಿ ಸಂಸ್ಕೃತ ಛಂದೋವೈವಿಧ್ಯಗಳ ಜೊತೆಗೆ ಕನ್ನಡ ಛಂದೋ ಪ್ರಕಾರಗಳನ್ನು ಬಳಸಿದ್ದಾರೆ. ಅವರು ಹೆಚ್ಚು ಕಡೆ ಬಳಸುವುದು ವೃತ್ತ ಮತ್ತು ಕಂದಗಳನ್ನು ಎನ್ನುವುದು ಗಮನಾರ್ಹ ಸಂಗತಿ. ಷೇಕ್ಸ್‌ಪಿಯರ್‌ನ ಬ್ಲಾಂಕ್‌ವರ್ಸ್‌ಗೆ ಪರ್ಯಾಯವಾದ ಕಾವ್ಯ ಪ್ರಕಾರವನ್ನು ಹುಡುಕುವ ಪ್ರಯತ್ನದಿಂದ ಹೆಚ್ಚು ರೂಪಾಂತರಕಾರರು ಹಿಂದೆ ಸರಿದರು. ಆದರೆ ಶ್ರೀಕಂಠೇಶಗೌಡರು ಷೇಕ್ಸ್‌ಪಿಯರ್‌ನ 'ಬ್ಲಾಂಕ್‌ವರ್ಸ್'ನ್ನು ವೃತ್ತವಾಗಿ ತಂದರು. ಹಾಗು "ರಗಳೆಯನ್ನು ಆಧುನಿಕ ಲೇಖಕರು ಸೃಜನಶೀಲವಾಗಿ ಬಳಸಬಹುದು ಎಂಬುದನ್ನು ಸಿದ್ಧ ಮಾಡಿ ತೋರಿಸಿದ ಮೊದಲ ಲೇಖಕರು"[14] ಅದರೆ ಇವರು ಚಂಪೂಶೈಲಿಯನ್ನು ವಿಶೇಷವಾಗಿ ಅನುಸರಿಸಿದ್ದಾರೆ.

**(ಅ) ಕನ್ನಡ ಮಾತ್ರಾ ಛಂದಸ್ಸು**

ಶ್ರೀಕಂಠೇಶಗೌಡರು ಪುಟ–46ರಲ್ಲಿ **2** ಅಕ್ಕರಿಕೆಗಳನ್ನು ಹಾಗೂ ಪುಟ–79 ರಲ್ಲಿ **1** ಸೀಸಪದ್ಯವನ್ನು ಬಳಸಿದ್ದಾರೆ. ಅಕ್ಕರಿಕೆಯಲ್ಲಿಯೂ ಅರ್ಥಪೂರ್ಣ ಪ್ರಾಸಗಳನ್ನು ಗುರ್ತಿಸಬಹುದು.

**ಉದಾ:-** ಕುಡಿತವಿದೀ ಸೇವಕರಿಗೆ- - - -

- - - - - - - - - - - - -

ಕುಡಿಸಿಹೆಸೀಗಳ್ ಜಿಸಿಬಿಸಿ- - - -

ಸೀಸಪದ್ಯವನ್ನು ವೀರಸೇನನ ಸ್ವ ಇಚ್ಛೆಯಿಂದ ಶಕ್ತಿಗಳನ್ನು (ಮಾಟಗಾತಿಯರು) ಭೇಟಿಯಾಗುವ ಸಂಧರ್ಭದಲ್ಲಿ ಬಳಸಿದ್ದಾರೆ.

ಇದೊಂದು ಮಾತನ್ನು- - -

- - - - - - - - - - - -

ನೀವೆಲ್ಲ ಸರಿಯಾಗಿ ಪೇಳಿ ಬೇಗ

ಕೃತಿಯಲ್ಲಿ **17** ರಗಳೆಗಳನ್ನು ಸೃಜನಶೀಲವಾಗಿ ಬಳಸಿದ್ದಾರೆ. ಈ ರಗಳೆಗಳನ್ನು ಹೊಸಗನ್ನಡದಲ್ಲಿ ಮತ್ತು ಹಳಗನ್ನಡದಲ್ಲಿ ಬಳಸಿರುವುದು ಶ್ರೀಕಂಠೇಶಗೌಡರ ಅನುವಾದದ ವೈಶಿಷ್ಟ್ಯವಾಗಿದೆ. ಇಲ್ಲಿ ಕವಿಯಭಾಷೆಯ ಮೇಲೆ ಜನಪದದ ಪ್ರಭಾವವಿರುವುದನ್ನು ಕಾಣಬಹುದು.

ಹೊಸಗನ್ನಡ ರಗಳೆ – ಬಿಟ್ಟಿದ್ದ ಬಿಟ್ಟಂತೆ ತೊಟ್ಟಿದ್ದ ತೊಟ್ಟಂತೆ

ಒಟ್ಟಾಗಿ ಸೇರುತ್ತ ಚಟ್ಟವನ್ನೇರುತ್ತ

ಪಟ್ಟಾದ ಗಾಳೀಲಿ ಮುಟ್ಟುವೆವು ಮುಗಿಲನ್ನು

ಬಿಟ್ಟಿದ್ದ ಬಿಟ್ಟಂತೆ ತೊಟ್ಟಿದ್ದ ತೊಟ್ಟಂತೆ(ಪುಟ–23)

ಹಳಗನ್ನಡ ರಗಳೆಯೊಂದನ್ನು ನೋಡಬಹುದು.

ಕೊಳುಗುಳದ ಘಾತಿಯಂ ನಮ್ಮವರ ಭೀತಿಯಂ

- - - - - - - - - - - - - - - -

ಬರುತಿರುವ ತೇಜಿಯಂ ಬರ್ಭರದ ವಾಜಿಯಂ (ಪುಟ–25)

ಈ ರಗಳೆ ಕೇವಲ ಕಾವ್ಯಶೈಲಿಯಿಂದ ಕೂಡಿದೆ. ಆದರೆ ನಾಟಕೀಯ ಶೈಲಿಯಲ್ಲಿಲ್ಲ.

ಉಳಿದ ಗಾಳಿ ಕೈಯೊಳಿಹುದು ಕೊಳಗದಲ್ಲಿ ಕೂತುಕೊಂಡು

- - - - - - - - - - - - - - - - - -

ನಳ್ಳಿಯನ್ನು ತಿಂದುಕೊಂಡು ಕೊಳ್ಳೆಯನ್ನು ಹಿಡಿದುಕೊಂಡು(ಪುಟ–27)

ಕೆಳಗಿನ ರಗಳೆಯು ಅಪ್ಪಟ ನಾಟಕ ಶೈಲಿಯಿಂದ ಕೂಡಿದೆ.

ಹಾ ಬಲಿ! ಹೋಬಲಿ! ಹಾಬಲಿ! ಹೋಬಲಿ!

ಕೋಬಲಿ! ನೀಬಲಿ! ತಾಬಲಿ! ಮೂರ್ಬಲಿ!

ಭಲಭಲ! ಬಲಿಬಲಿ! ಬಿಡುಬಿಡು! ಗಲಬಲಿ!
ಹಾಹಾಹಾ! ಹೋಹೋಹೋ! ಓಹೋ! (ಪುಟ–28)

ಈ ರಗಳೆಯಲ್ಲಿ ಸೊಗಸಾದ ಹಾಡಿನ ಲಯವಿದೆ.

ನೂಕಿ ನೂಕಿ ಕೊಳ್ಳಿಯ ಬಾನೆ ಕೆಳಗೆ ಕೊಳ್ಳಿಯ
– – – – – – – – – – – – – – –
ಭಕ್ತಿಯಿಂದ ಶಕ್ತಿಯ ಭುಕ್ತಿಗೀಯ್ಯೆ ಕೊಳ್ಳಿಯ (ಪುಟ–76)

**(ಆ) ಸಂಸ್ಕೃತ ವೃತ್ತಗಳು**

ನಾಂದಿ ಪದ್ಯಗಳನ್ನು ಇಷ್ಟದೈವವನ್ನು ಪ್ರಾರ್ಥಿಸುವ ಪರಿಪಾಠವಿದೆ. ಆದರೆ ಶ್ರೀಕಂಠೇಶಗೌಡರು ಷೇಕ್ಸ್‌ಪಿಯರ್‌ನ 'ಮ್ಯಾಕ್ಬೆತ್'ನ್ನು ಕನ್ನಡ ಭಾಷೆಗೆ ತರುವ ಪ್ರಯತ್ನವನ್ನು 'ಶಾರ್ದೂಲ ವಿಕ್ರೀಡಿತ' ವೃತ್ತದ ಮೂಲಕ ಪ್ರಾರಂಭಿಸಿರುವುದನ್ನು ಕಾಣಬಹುದು.

ಷೇಕ್ಸ್‌ಪಿಯರ್ ಕವಿ ಸಾರ್ವಭೌಮನೊರೆದಾ– – –
– – – – – – – – – – – – – – – –

ಶ್ರೀ ಕರ್ಣಾಟದೊಳಿರ್ದೆ ಪೆರ್ಚೆ ಮದಮಂ ವಾಣಿ ವಿಲಾಸ ಸ್ಥಿರಂ(ಪುಟ–23, ಪ್ರತಾಪರುದ್ರದೇವ) ನಾಟಕದುದ್ದಕ್ಕು **26** ವೃತ್ತಗಳನ್ನು ಬಳಸಿದ್ದಾರೆ.

ಇಡೀ ನಾಟಕದಲ್ಲಿ ಕಂದ ಪದ್ಯಗಳದ್ದೇ ಸಿಂಹಪಾಲಿದ್ದು ಒಟ್ಟು **209** ಕಂದಗಳನ್ನು ಬಳಸಿದ್ದಾರೆ. ಸಂಪೂರ್ಣ ಕನ್ನಡ ಪದಗಳನ್ನೇ ಬಳಸಿರುವ ಕಂದವೊಂದನ್ನು ನೋಡಬಹುದು.

**ಉದಾ:–** ಮುಳಿಸಿನ ನನ್ನುರಿ ತಗ್ಗದೆ
ಬಳಸುತ ಮನವಂ ಸುಡುತಿರು ವೀಗಿದ ಮಾಳ್ವೆಂ
ಚಳಕದೊಳೀಗಿದ ಮಾಡದೆ
ಗಳಹುತ ನಾನಿರೆ ಗಳಿಗೆಯು ಬೊಗಳುವ ನಾಯೋಲ್ (ಪುಟ–84)

ಸಂಸ್ಕೃತ ಭೂಯಿಷ್ಠವಾದ ಕಂದಗಳು ಸಾಕಷ್ಟಿವೆ–

**ಉದಾಹರಣೆಗೆ:–** ಭಂಗವಹುದೆ ಕಾರ್ಯಕೆ ನಿ
ನ್ನಂಗದೊಳೊಪ್ಪ ವೆಡೆಯಲ್ಲಿ ಧೈರ್ಯವ ನೀನೀ
ಗಿಂಗದಿರಿಸಿಲದೊಡೆ ಕಾರ್ಯಕೆ
ಭಂಗವದೆಂತಹುದು ಗುಂಡಿಗೆಯನಿರಸದೆಯೋಳ್(ಪು–41)

ಇವುಗಳೆಲ್ಲದೇ **3** ತ್ರಿಪದೋನ್ನತಿ, **5** ಅಚ್ಯುತ, **2** ಚಿತ್ರಪದಂಗಳನ್ನು ಬಳಸಿಕೊಳ್ಳುವ ಮೂಲಕ ತಮ್ಮ ಸಂಸ್ಕೃತ ಪಾಂಡಿತ್ಯವನ್ನು ಪರಿಚಯಿಸಿದ್ದಾರೆ.

**ಇ) ಗೇಯ ಗೀತೆಗಳು**

ಕೇವಲ ಛಂದೋನಿಯಮದ ಪಾಂಡಿತ್ಯಕ್ಕಾಗಿ ರಚಿಸಿದ ರಚನೆಗಳಲ್ಲಿ ರಂಗ ಸ್ಥಳದಲ್ಲಿ ನಟರಿಗೆ ಅಭಿನಯ ಕೌಶಲ್ಯವನ್ನು ತೋರಿಸಲು ಸಾಧ್ಯವಾಗುವಂತೆ. ಸಂಗೀತ ಪ್ರತಿಭೆ ಹೊರಹೊಮ್ಮುವಂತೆ ರಚಿತವಾದವುಗಳಾಗಿವೆ. ಪ್ರೇಕ್ಷಕರು ಮೆಲುಕು ಹಾಕುವ ಗೇಯತೆ ಒಳಗೊಂಡ ರಚನೆಗಳನ್ನು ನಾವು ನೋಡಬಹುದು.

**ಉದಾ:–** ಬನ್ನಿ ಬನ್ನಿ ಪೋಗುವ । ಕಾಲವ ಸೇರುವ
– – – – – – – – – – – – – – –
– – – – – – – ಮುರಿದಾಳು ಬನ್ನೀರಿ (ಪು–74)

ಹಿಂದೂಸ್ಥಾನಿಯ ಪ್ರಸಿದ್ಧ ದಾಟಿ, ರಾಗಗಳ ಹಾಡುಗಳನ್ನು ಬಳಸಿಕೊಂಡಿದ್ದಾರೆ. "ಜಾನಿಹೈ ಸೋಯಿ ಅಬ್ ಜಾಕೆ ಒತುಂದಲ್ ಮಿಯ್ಯ" ಮೊದಲಾದ ಧಾಟಿಯ **8** ಹಾಡುಗಳನ್ನು, 'ಸಿಸ್ಟರ್ ಅಂನಷಿ ವಾಕ್ಯ ಲೈಕ್‌ದಿಸ್' ಎಂಬ ಇಂಗ್ಲಿಷ್ ಧಾಟಿಯೊಂದನ್ನು ಹಾಗೂ ಬದುಕಿದೆ ಬದುಕಿದೆ ನಾನಿಂದು ಎಂಬ ಕನ್ನಡ ಧಾಟಿಯು ಒಳಗೊಂಡಂತೆ **25** ಹಾಡುಗಳನ್ನು ರಚಿಸಿದ್ದಾರೆ. ಇವುಗಳನ್ನು ಆದಿತಾಳ, ರೂಪಕತಾಳ, ಏಕತಾಳ, ಝುಂಪೆತಾಳಗಳಲ್ಲಿ, ಹಾಗೂ ನಾದನಾಮ, ಮೋಹನ, ಭೈರವಿ, ಯಮುನ್‌ಕಲ್ಯಾಣಿ, ಬೇಹಾಗ್, ಇಂಗ್ಲಿಷ್ ನೋಟು, ಶಂಕರಾಭರಣ ಮೊದಲಾದ ರಾಗಗಳಿಂದ ರಚಿಸಿದ್ದಾರೆ. ಇವುಗಳಲ್ಲಿ ಅವರ ಸಂಗೀತದ ಆಸಕ್ತಿಯನ್ನು ಗುರ್ತಿಸಬಹುದು. ಕೆಲವು ಹಾಡುಗಳಲ್ಲಿ ಅಂತ್ಯಪ್ರಾಸ ಮತ್ತು ಮಧ್ಯಪ್ರಾಸಗಳನ್ನು ಗುರ್ತಿಸಬಹುದು. ಇಲ್ಲಿ ಜನಪ್ರಿಯ ಅನ್ಯಭಾಷಾ ಹಾಡುಗಳ ಧಾಟಿ ಅಳವಡಿಸಿದ್ದಾರೆ. ಇದೇ ರೀತಿ ಜನಪದ ಶೈಲಿಯ **3** ಹಾಡುಗಳನ್ನು ಇವರು ಬಳಸಿರುವುದನ್ನು ಕಾಣಬಹುದು.

**ಉದಾ:–** ಅಂತು ಇಂತು ಸೇರುವೆ ಗಂಡನನ್ನು ಕೊಲ್ಲುವೆ
ಕೊಂದು ರಕ್ತ ಪೀರುವೆ ಪೀರಿ ಕೇಕೆ ಹಾಕುವೆ (ಪು–27)

ಹಾಗೆಯೇ ಲಾವಣಿಯೊಂದನ್ನು ಕಾಣಬಹುದು.

**ಉದಾ:–** ಯಾರೂ ಎಲ್ಲಿಗೆ ಪೋಗುವೆ ಉಸುರೆಲ– – – –
– – – – – – – – – – – – – – –
– – – – – – – – – ನಾಮವ ನನ್ನೊಡನೀಗ.

---

# ಅಧ್ಯಾಯ–6

# ಶ್ರೀಕಂಠೇಶಗೌಡರ 'ಪ್ರಮೀಳಾರ್ಜುನೀಯ' ನಾಟಕಸಮೀಕ್ಷೆ

## I ಷೇಕ್ಸ್‌ಪಿಯರ್‌ನ 'ಎ ಮಿಡ್ ಸಮ್ಮರ್ ನೈಟ್ಸ್ ಡ್ರೀಮ್' ನಾಟಕದ ಕಥಾಸಾರ

### 1ನೇ ಅಂಕ

ಗ್ರೀಕ್ ದೇಶದ ಮಹಾನಗರ ಅಥೆನ್ಸ್‌ನ್ನು 'ಥೀಸಿಯಸ್' ಆಳುತ್ತಿದ್ದನು. ಇವನ ಪ್ರೇಯಸಿ 'ಹಿಪಾಲಿಟ' ಅಮೆಜಾನಿನ ರಾಣಿ. ನಾಲ್ಕು ದಿನಗಳಲ್ಲಿ ಬರುವ ಹುಣ್ಣಿಮೆಯ ದಿನ ಇವರ ಮದುವೆ ನಡೆಯುವ ಕಾರಣ 'ಫಿಲಾಸ್ಟ್ರೇಟ್'ಗೆ ಅಥೆನ್ಸಿನ ಯುವಜನರನ್ನು ಮನರಂಜನೆಗೆ ಸಿದ್ಧಗೊಳಿಸುವಂತೆ ಹೇಳುತ್ತಾನೆ. ಅಷ್ಟರಲ್ಲಿ 'ಈಗಿಯಸ್' ಎಂಬ ವೃದ್ಧನೊಬ್ಬ ರಾಜನ ಬಳಿಗೆ ದೂರೊಂದನ್ನು ತರುತ್ತಾನೆ. ಅವನೊಟ್ಟಿಗೆ ಮಗಳು 'ಹರ್ಮಿಯಾ' ಯುವಕರಾದ 'ಲೈಸ್ಯಾಂಡರ್' ಮತ್ತು 'ಡೆಮಿಟ್ರಿಯಸ್' ಬಂದಿರುತ್ತಾರೆ. ಇವರಿಬ್ಬರು ಹರ್ಮಿಯಾಳಲ್ಲಿ ಒಲವು ಡೆಮಿಟ್ರಿಯಸ್ ತನ್ನ ಮಗಳನ್ನು ವರಿಸಲು ಈಗಿಯಸನ ಒಪ್ಪಿಗೆಯಿದೆ. ಆದರೆ ಲೈಸ್ಯಾಂಡರ ತನ್ನ ಮಗಳನ್ನು ಮರಳು ಮಾಡಿದ್ದಾನೆ, ಅಥೆನ್ಸಿನ ಕಾನೂನಿನ ಪ್ರಕಾರ ನನಗೆ ನ್ಯಾಯ ದೊರಕಿಸಿಕೊಡಿ ಎಂದು ಅಂಗಲಾಚುತ್ತಾನೆ.

ಥೀಸಿಯಸ್ ಹರ್ಮಿಯಾಳಿಗೆ ತಂದೆಯ ಮಾತಿಗೆ ಬೆಲೆ ಕೊಡುವಂತೆ ಬುದ್ಧಿ ಹೇಳುತ್ತಾನೆ. ಥೀಸಿಯಸ್ ಹೆತ್ತವನ ಬಯಕೆಗೆ ಸ್ಪಂದಿಸದಿದ್ದರೆ ಪೂರ್ಣಿಮೆಯ ದಿನ ಸಾಯಲು ಸಿದ್ಧಳಾಗು ಇಲ್ಲವೇ ಅವನ ಆಸೆಯಂತೆ ಡೆಮಿಟ್ರಿಯಸನನ್ನು ವರಿಸು ಎನ್ನುತ್ತಾನೆ. ಥೀಸಿಯಸನು ಡೆಮಿಟ್ರಿಯಸ್ ಮತ್ತು ಈಗಿಯಸ್‌ರನ್ನು ತನ್ನ ಜೊತೆ ಕರೆದೊಯ್ಯುತ್ತಾನೆ. ಹರ್ಮಿಯಾ ಮತ್ತು ಲೈಸ್ಯಾಂಡರ್ ಉಳಿಯುತ್ತಾರೆ. ತಮ್ಮ ಪಾಲಿಗಿರುವ ಸತ್ವ ಪರೀಕ್ಷೆಯನ್ನು ತಾಳ್ಮೆಯಿಂದ ಎದುರಿಸೋಣವೆಂದು ಇಬ್ಬರೂ ನಿರ್ಧರಿಸುತ್ತಾರೆ. ಲೈಸ್ಯಾಂಡರ್ ಒಂದು ಉಪಾಯ ಹುಡುಕುತ್ತಾನೆ. ಇಲ್ಲಿಂದ ಏಳು ಹರಿದಾರಿಯಲ್ಲಿ ನನ್ನ ಸೋದರತ್ತೆಯೊಬ್ಬಳಿದ್ದಾಳೆ. ಅವಳು ಅಗರ್ಭ ಶ್ರೀಮಂತೆ. ಆಕೆಗೆ ಮಕ್ಕಳಿಲ್ಲ, ಅವಳು ನನ್ನನ್ನು ಮಗನಂತೆ ಮುದ್ದಿಸುತ್ತಾಳೆ. ಅಥೆನ್ಸಿನ ಕಾನೂನು ಅಲ್ಲಿಗೆ ಅನ್ವಯಿಸುವುದಿಲ್ಲ. ಅಲ್ಲಿ ನಿನ್ನನ್ನು ಲಗ್ನವಾಗುವುದು ಸಾಧ್ಯ. ನಾಳೆ ರಾತ್ರಿ ಮನೆಯಿಂದ ತಪ್ಪಿಸಿಕೊಂಡು ಮೇ ಹಬ್ಬದಂದು ಹೆಲನಳೊಂದಿಗೆ ಭೇಟಿಯಾಗಿದ್ದವಲ್ಲ ಅಲ್ಲಿಗೆ ಬಾ ಕಾಯುತ್ತಿರುತ್ತೇನೆ ಎಂದು ಲೈಸ್ಯಾಂಡರ್ ಹೇಳುತ್ತಾನೆ.

ಹರ್ಮಿಯಳು ನಂತರ ಹೆಲನಳನ್ನು ಭೇಟಿಯಾದಳು. ಹೆಲನಳಿಗೆ ಡಿಮಿಟ್ರಿಯಸನಲ್ಲಿ ಪ್ರೇಮವಿದೆ. ಆದರೆ ಅವನು ತಿರಸ್ಕರಿಸುತ್ತಾನೆ. ಇದರಿಂದ ಹೆಲನ್ ದುಃಖಿಸುತ್ತಾಳೆ. ಅವಳನ್ನು ಸಮಾಧಾನಪಡಿಸಲು, ನಾವಿಬ್ಬರು ನಾಳೆ ಅಥೆನ್ಸಿನಿಂದ ಪಾರಾಗುತ್ತೇವೆ ಎನ್ನುತ್ತಾಳೆ. ಹರ್ಮಿಯ ಲೈಸ್ಯಾಂಡರು ತಪ್ಪಿಸಿಕೊಂಡು ಹೋಗುವ ವಿಚಾರವನ್ನು ಡಿಮಿಟ್ರಿಯಸ್‌ಗೆ ತಿಳಿಸುತ್ತಾಳೆ. ಅವನು ಅವರನ್ನು ಹಿಂಬಾಲಿಸಿದಾಗ ನಾನು ಮತ್ತೆ ಅವನನ್ನು ಸಂಧಿಸಬಹುದೆಂಬ ಆಸೆ ಅವಳಿಗೆ ಇರುತ್ತದೆ. ಅಥೆನ್ಸ್‌ನಲ್ಲಿ ಕೂಲಿ ಕಾರ್ಮಿಕರ ನಾಟಕ ಕಂಪನಿಯೊಂದಿದೆ. ಅದರ ವ್ಯವಸ್ಥಾಪಕ ಬಡಗಿ 'ಕ್ವಿನ್ಸ್. ಥೀಸಿಯಸ್ ದೊರೆಯ ಮದುವೆಯ ದಿನ ನಾಟಕವೊಂದನ್ನು ಆಡಬೇಕೆಂಬುದು ಇವರ ಬಯಕೆ. ಕಲಾವಿದರೆಲ್ಲಾ ಸೇರಿದ್ದಾರೆ. 'ಪಿರಮಿಸ್ ಮತ್ತು ಥಿಸ್ಬಿ' ಎಂಬ ಪ್ರೇಮಿಗಳ ದುಃಖಾಂತ ನಾಟಕದ ಕಥೆ ಆರಿಸಿಕೊಂಡಿದ್ದಾರೆ. ಕ್ವಿನ್ಸ್ ಪಾತ್ರಗಳನ್ನು ಹಂಚಿ, ನಾಳೆ ರಾತ್ರಿಯೊಳಗೆ ನಿಮ್ಮ ಮಾತುಗಳನ್ನು ಸರಿಯಾಗಿ ಕಲಿತುಕೊಂಡು ಅರಮನೆಯಿಂದ ಮೈಲಿ ದೂರವಿರುವ ಉಪವನಕ್ಕೆ ಬನ್ನಿ ಎಂದು ಎಲ್ಲರಿಗೂ ತಿಳಿಸುತ್ತಾನೆ. ಅವರೆಲ್ಲರೂ ನಿರ್ಗಮಿಸುತ್ತಾರೆ.

## 2ನೇ ಅಂಕ

ಅಥೆನ್ಸ್‌ನ ಅರಣ್ಯವೊಂದರಲ್ಲಿ 'ಯಕ್ಷಿಣಿ ಮತ್ತು ಪಕ್' ಭೇಟಿಯಾಗುತ್ತಾರೆ. ಓಬೆರಾನ್ ಮತ್ತು ಟೈಟಾನಿಯ ಮಧ್ಯೆವಿರಸವುಂಟಾಗಿದೆ. ಪ್ರತಿರಾತ್ರಿ ಬರುವಂತೆ ಅಂದು ಅರಣ್ಯಕ್ಕೆ ಬಂದಿದ್ದಾರೆ. ಕಾಡಿನಲ್ಲಿ ಭೇಟಿಯಾದಾಗ ಪರಸ್ಪರ ಆರೋಪಗಳು, ಜಗಳಗಳು. ಈ ವಿರಸಕ್ಕೆ ಕಾರಣ ಟೈಟಾನಿಯ ಓಬೆರಾನ್‌ಗೆ ಪುಟ್ಟ ಹುಡುಗನನ್ನು ಕೊಡಲು ನಿರಾಕರಿಸಿದ್ದು. ಅವಳು ಆ ಮಗುವಿನ ತಾಯಿ ಸತ್ತಾಗ ಅದನ್ನು ಗುಟ್ಟಾಗಿ ತಂದು ಅರಣ್ಯದಲ್ಲಿಟ್ಟುಕೊಂಡಿದ್ದಳು. ಆ ಹುಡುಗನನ್ನು ಓಬೆರಾನ್ ಸೇವಕನನ್ನಾಗಿ ಮಾಡಿಕೊಳ್ಳಬೇಕೆಂದು ಬಯಸಿದ್ದನು. ಟೈಟಾನಿಯ ನಿರ್ಧಾರದಿಂದ ಓಬೆರಾನ ಕೋಪಗೊಳ್ಳುತ್ತಾನೆ. ಥೀಸಿಯಸ್‌ನ ಲಗ್ನ ಮುಗಿಯುವ ತನಕ ಟೈಟಾನಿಯ ಅಡವಿಯಲ್ಲಿರಲು ನಿರ್ಧರಿಸಿದ್ದಾಳೆ. ಅನಂತರ ಓಬೆರಾನ್ ತನ್ನ ಆಪ್ತನಾದ ಪಕ್‌ನನ್ನು ಬರಮಾಡಿಕೊಳ್ಳುತ್ತಾನೆ. ಆಗ ಪ್ರೇಮದೇವತೆ ಕ್ಯೂಪಿಡನ ಬಾಣ ಕಾಡಿನಲ್ಲಿ ಒಂದು ಹೂವಿನ ಮೇಲೆ ಬೀಳುತ್ತದೆ. ಆ ಹೂವನ್ನು ತರಬೇಕು ಟೈಟಾನಿಯ ನಿದ್ದೆ ಮಾಡುವಾಗ ಅವಳ ಕಣ್ಣರಪ್ಪೆಯ ಮೇಲೆ ಆ ಹೂವಿನ ರಸವನ್ನು ಹಾಕುತ್ತೇನೆ. ಎಚ್ಚರವಾದ ಮೇಲೆ ಅವಳು ಯಾವುದಾದರೊಂದು ಪ್ರಾಣಿಯಲ್ಲಿ ಮೋಹಗೊಳ್ಳುತ್ತಾಳೆ. ಅವಳ ಹುಡುಗನನ್ನು ನನ್ನ ಸೇವಕನಾಗಿ ಮಾಡಿಕೊಳ್ಳುತ್ತೇನೆ ಎಂದು ಪಕ್‌ಗೆ ತಿಳಿಸುತ್ತಾನೆ. ಪಕ್‌ನಿಗೆ ತನ್ನ ಯಜಮಾನನ ಚೇಷ್ಟೆಯು ಖುಷಿ ತಂದಿತು.

ಡೆಮಿಟ್ರಿಯಸ್‌ನನ್ನು ಹಿಂಬಾಲಿಸುತ್ತ ಹೆಲೆನ್ ಬರುತ್ತಿದ್ದಾಳೆ. ನಾನು ನಿನ್ನನ್ನು ಪ್ರೀತಿಸುವುದಿಲ್ಲ ಬೆನ್ನಟ್ಟಿ ಬರಬೇಡವೆಂದು ಡೆಮಿಟ್ರಿಯಸ್ ಹೇಳುತ್ತಾನೆ. ಅವರ ಮಾತು ಗಳನ್ನು ಕೇಳಿಸಿಕೊಂಡ ಓಬೆರಾನ್ ಪ್ರೇಮಿಗಳಿಗೆ ನೆರವಾಗಲು ಬಯಸುತ್ತಾನೆ. ಅಷ್ಟರಲ್ಲಿ ಪಕ್ ಹೂವಿನೊಂದಿಗೆ ಬರುತ್ತಾನೆ. ಈ ಹೂವಿನ ಪಕಳೆಗಳನ್ನು ತೆಗೆದುಕೋ ಇಲ್ಲಿಗೆ ಒಬ್ಬ ಸುಂದರ ಅಥೆನ್ಸ್‌ನ ಯುವತಿ ಬಂದಿದ್ದಾಳೆ. ಅವನು ನಿದ್ದೆಮಾಡುವ ಸಮಯ ನೋಡಿ ಒಂದೆರಡು ಹನಿರಸವನ್ನು ಅವನ ಕಣ್ಣಿನೊಳಗೆ ಹಾಕು. ಆದರೆ ಹಾಗೆ ಮಾಡುವಾಗ ಅವರಿಬ್ಬರೂ ಹತ್ತಿರವೇ ಇರಬೇಕು. ಪ್ರೇಮ ಫಲಿಸಲು ನೆರವಾಗಬೇಕೆಂದು ಕೇಳುತ್ತಾನೆ. ಪಕ್‌ನು ಸಂತೋಷದಿಂದ ಒಪ್ಪಿಕೊಳ್ಳುತ್ತಾನೆ. ಅರಣ್ಯದ ಮತ್ತೊಂದು ಭಾಗದಲ್ಲಿ ಟೈಟಾನಿಯ ರಾಣಿಯು ಹೂವಿನ ಹಾಸಿಗೆಯ ಮೇಲೆ ನಿದ್ದೆಹೋಗಿದ್ದಳು. ಪಕ್ ಬಂದು ಪ್ರೇಮ ಪುಷ್ಪದ ರಸವನ್ನು ಅವಳ ಕಣ್ಣಿನಲ್ಲಿ ಹಾಕಿ ಹೊರಟುಹೋಗುತ್ತಾನೆ.

ಲೈಸ್ಯಾಂಡರ್ ತನ್ನ ಪ್ರಿಯತಮ ಹರ್ಮಿಯಾಳೊಂದಿಗೆ ಸೋದರತ್ತೆಯ ಮನೆ ಕಡೆ ಹೆಜ್ಜೆಹಾಕುತ್ತಿದ್ದಾನೆ. ಸ್ವಲ್ಪ ದೂರ ಹೋಗುವಷ್ಟರಲ್ಲೇ ಹರ್ಮಿಯಾಳಿಗೆ ಆಯಾಸವಾಗುತ್ತದೆ. ಆದ್ದರಿಂದ ಅರಣ್ಯದಲ್ಲೇ ವಿಶ್ರಮಿಸಿ ಬೆಳಗಿನ ಜಾವ ಹೊರಡಲು ನಿರ್ಧರಿಸುತ್ತಾರೆ. ಹರ್ಮಿಯಾ ಹುಲ್ಲುದಿಬ್ಬಕ್ಕೆ ಒರಗಿ ಮಲಗುತ್ತಾಳೆ. ಸ್ವಲ್ಪ ದೂರದಲ್ಲಿ ನೆಲದ ಮೇಲೆ ಲೈಸ್ಯಾಂಡರ್ ನಿದ್ರೆ ಹೋಗುತ್ತಾನೆ ಅವನ ಕಣ್ಣಿಗೆ ಹೂವಿನ ಒಂದೆರಡು ಹನಿಗಳನ್ನು ಪಕ್ ಹಾಕಿದ. ಇತ್ತ ಡೆಮಿಟ್ರಿಯಸನನ್ನು ಹೆಲನ್ ಹಿಂಬಾಲಿಸುತ್ತಲೇ ಇರುತ್ತಾಳೆ. ಕೋಪಗೊಂಡ ಡೆಮಿಟ್ರಿಯಸ್ ಅವಳನ್ನು ಕಾಡಿನಲ್ಲೇ ಬಿಟ್ಟು ಹೋಗುತ್ತಾನೆ. ಪ್ರೇಮಪುಷ್ಪದ ಪ್ರಭಾವದಿಂದಾಗಿ ಹೆಲನ್‌ಳನ್ನು ಮೊದಲು ಕಂಡ ಲೈಸ್ಯಾಂಡರನಿಗೆ ಅವಳಲ್ಲಿ ಪ್ರಣಯ ಹುಟ್ಟುತ್ತದೆ ಹೆಲನ್ ಕೋಪ ಮಾಡಿಕೊಂಡು ಹೊರಟು ಹೋಗುತ್ತಾಳೆ. ಮಲಗಿದ್ದ ಹರ್ಮಿಯಾಳನ್ನು ಗಮನಿಸದೆ ಲೈಸ್ಯಾಂಡರನು ಹೆಲನ್‌ಳನ್ನು ಹಿಂಬಾಲಿಸುತ್ತಾನೆ.

## 3ನೇ ಅಂಕ

ಕ್ವಿನ್ಸ್ ನಾಟಕ ಕಂಪನಿಯವರು ಅಭ್ಯಾಸಕ್ಕೆಂದು ಅಥೆನ್ಸಿನ ಅರಣ್ಯಕ್ಕೆ ಬರುತ್ತಾರೆ. ಪಕ್‌ನು ನಾಟಕದ ಅಭ್ಯಾಸ ನಡೆಯುವ ಸ್ಥಳಕ್ಕೆ ಬರುತ್ತಾನೆ. ತನ್ನ ಕುತಂತ್ರದಿಂದ ಬಾಟಮ್‌ಗೆ ಕತ್ತೆಯ ತಲೆಯನ್ನು ಜೋಡಿಸುತ್ತಾನೆ. ಬಾಟಮ್‌ನ ರೂಪವನ್ನು ನೋಡಿ ಕ್ವಿನ್ಸ್ ಭಯಭೀತನಾಗುತ್ತಾನೆ. ಕೆಲವರು ಓಡಿಹೋಗುತ್ತಾರೆ. ಕತ್ತೆಯ ಹಾಡಿನ ಧ್ವನಿಯನ್ನು ಕೇಳಿ ಗಂಧರ್ವ ಮಹಾರಾಣಿ ಟೈಟಾನಿಯಾ ಎಚ್ಚರವಾಗುತ್ತಾಳೆ. ಪ್ರೇಮಪುಷ್ಪದ ರಸದ ಪ್ರಭಾವದಿಂದ ಕತ್ತೆಮುಖದ ಬಾಟಮ್‌ನನ್ನು ಮೋಹಿಸುತ್ತಾಳೆ. ನೀನು ನನ್ನೊಂದಿಗೆ ಬಾಳು. ಅಡವಿಯನ್ನು ಬಿಟ್ಟು ಹೋಗಬೇಡ ಎನ್ನುತ್ತಾಳೆ. ಬಾಟಮ್‌ನನ್ನು ಯಕ್ಷಿಣಿಯರು ರಾಣಿಯ ಮಂಚಕ್ಕೆ ಕರೆದೊಯ್ಯುತ್ತಾರೆ.

ಓಬೆರಾನ್ ಪಕ್‌ನ ಕಾರ್ಯವನ್ನು ಮೆಚ್ಚಿಕೊಳ್ಳುತ್ತಾನೆ. ಅಷ್ಟರಲ್ಲಿ ಡೆಮಿಟ್ರಿಯಸ್ ಮತ್ತು ಹರ್ಮಿಯಾ ಬರುತ್ತಿದ್ದಾರೆ. ಪಕ್‌ನು ಯುವತಿಯೇನೋ ಅವಳೇ ಆದರೆ ಯುವಕ ಇವನಲ್ಲ ಎನ್ನುತ್ತಾನೆ. ಪಕ್‌ನು ಏನೋ ತಪ್ಪು ಮಾಡಿರುವನೆಂದು ಓಬೆರಾನ್‌ಗೆ ಅನ್ನಿಸುತ್ತದೆ. ನೈಜ ಪ್ರೇಮಿಯನ್ನು ವಂಚಕನನ್ನಾಗಿ ಮಾರ್ಪಡಿಸಿದೆ. ಆದರೆ ವಂಚಕರನ್ನು ನೈಜಪ್ರೇಮಿಯಾಗಿಸಿಲ್ಲವೆಂದಾಗ, ಡೆಮಿಟ್ರಿಯಸ್‌ನ ಕಣ್ಣಿಗೆ ಪ್ರೇಮಲತೆಯ ಸೊಪ್ಪಿನ ರಸವನ್ನು ಓಬೆರಾನ್ ಹಚ್ಚುತ್ತಾನೆ. ಲೈಸ್ಯಾಂಡರ್ ಹೆಲನ್‌ಳಿಗೆ ತನ್ನ ಪ್ರೀತಿಯ ಬಗ್ಗೆ ಹೇಳಿಕೊಳ್ಳುತ್ತಾನೆ. ನಾನು ಅವಳನ್ನು ಆಗ ವಿವೇಚನೆಯಿಲ್ಲದೆ ಪ್ರೇಮಿಸಿದೆ ಎನ್ನುತ್ತಾನೆ. ಡೆಮಿಟ್ರಿಯಸ್‌ನಿಗೆ ಎಚ್ಚರವಾಗುತ್ತದೆ. ಅವನು ಪ್ರೇಮಪುಷ್ಪದ ರಸದ ಪರಿಣಾಮದಿಂದಾಗಿ ಅವನು ಹೆಲನ್‌ಳಲ್ಲಿ ಅನುರಕ್ತನಾಗುತ್ತಾನೆ. ಹೆಲೆನ್‌ಗಳಿಗೆ ಇಬ್ಬರು ನನ್ನನ್ನು ವಿನೋದಕ್ಕೆ ಬಲಿಪಶುಮಾಡುತ್ತಿದ್ದಾರೆ. ಅನ್ನಿಸುತ್ತದೆ. ಆ ಹೊತ್ತಿಗೆ ಸರಿಯಾಗಿ ಹರ್ಮಿಯ ಬರುತ್ತಾಳೆ. ಬಾಲ್ಯದ ಗೆಳತಿಯಾದ ನನ್ನನ್ನು ಏಕೆ ಪೀಡಿಸುತ್ತಿರುವೆ ಹರ್ಮಿಯ ಎಂದಾಗ, ಹರ್ಮಿಯಳಿಗೆ ಹೆಲನಾಳ ಬಗ್ಗೆ ಕನಿಕರವುಂಟಾಯಿತು. ಲೈಸ್ಯಾಂಡರ್‌ಗೆ ಚೇಷ್ಟೆ ಮಾಡಬೇಡವೆಂದು ವಿನಂತಿಸಿಕೊಳ್ಳುತ್ತಾಳೆ.

ಹರ್ಮಿಯಳು ಎಲ್ಲವಕ್ಕೂ ಮೂಲಕಾರಣ ಹೆಲನ್ ಎಂದು ತಿಳಿಸುತ್ತಾಳೆ. ಹೆಲನ್‌ಳನ್ನು ಬಯಸಿದ ಡೆಮಿಟ್ರಿಯಸ್ ಮತ್ತು ಲೈಸ್ಯಾಂಡರ್ ಪುಷ್ಪರಸದ ಪರಿಣಾಮದಿಂದಾಗಿ ತಪ್ಪಾಗಿ ಕಲ್ಪಿಸಿಕೊಂಡು ಯುದ್ಧಕ್ಕಿಳಿಯುತ್ತಾರೆ. ಹೆಲೆನ್‌ಳು ಅಲ್ಲಿಂದ ಅಥೆನ್ಸ್‌ಗೆ ಓಡಿಹೋಗುತ್ತಾಳೆ. ಹರ್ಮಿಯಳು ಭಯದಿಂದ ಓಡುತ್ತಾಳೆ. ಶತ್ರುಗಳಿಬ್ಬರು ಕಾಡಿನಲ್ಲಿ ಅಲೆದಲೆದು, ದಣಿದು ಮರದಡಿಯಲ್ಲಿ ಮಲಗುತ್ತಾರೆ. ಹರ್ಮಿಯಾ, ಹೆಲನ್ ನಿದ್ದೆಗೆ ಜಾರುತ್ತಾರೆ. ಹೀಗೆ ನಾಲ್ಕುಜನ ಪ್ರೇಮಿಗಳು ತಮಗರಿವಿಲ್ಲದಂತೆ ಗಾಢವಾದ ನಿದ್ದೆಯಲ್ಲಿ ಮುಳುಗುತ್ತಾರೆ.

## 4ನೇ ಅಂಕ

ಓಬೆರಾನ್ ಪಕ್‌ನನ್ನು ಕರೆದು ರಾಣಿಯ ಹೀನಸ್ಥಿತಿಯನ್ನು ತೋರಿಸುತ್ತಾನೆ. ರಾಣಿಯನ್ನು ಛೇಡಿಸಿದ ಮೇಲೆ ಅವಳು ತನ್ನೊಂದಿಗಿದ್ದ ಆ ಹುಡುಗನನ್ನುಓಬೆರಾನ್‌ಗೆ ಕೊಡುತ್ತಾಳೆ. ಅವನು ತನ್ನ ಸೇವಕನನ್ನಾಗಿ ಹುಡುಗನನ್ನು ನೇಮಿಸಿಕೊಳ್ಳುತ್ತಾನೆ. ರಾಣಿಯ ಕಣ್ಣಿನ ಮೇಲೆ ಹೂವಿನ ರಸವನ್ನು ಎರಚಿದಾಗ ಅವಳು ಮೊದಲಿನಂತಾಗುತ್ತಾಳೆ ಆ ಕಡೆ ಎರಡು ಜೋಡಿ ಪ್ರೇಮಿಗಳು ಮರದಡಿಯಲ್ಲಿ ತಮಗರಿವಿಲ್ಲದೆ ಮಲಗಿರುತ್ತಾರೆ. ಪ್ರೇಮಪುಷ್ಪದ ಪ್ರಭಾವದಿಂದ ಹೆಲೆನ್‌ಳನ್ನು ಲೈಸ್ಯಾಂಡರ್ ಮೋಹಿಸುತ್ತಾನೆ.

ಥೀಸಿಯಸ್ ಮದುವೆ ಸಿದ್ಧತೆ ಜೋರಾಗಿ ನಡೆದಿತ್ತು. ಮೇ ಹಬ್ಬ ಆಚರಣೆಯ ಸಿದ್ಧತೆಯೂ ಸಾಗಿತ್ತು. ರಾಜನಿಗೆ, ಲೈಸ್ಯಾಂಡರ್ ತನ್ನ ಹಾಗೂ ಹರ್ಮಿಯಳ ಮದುವೆಗಾಗಿ

ಅಥೆನ್ಸ್‌ನಿಂದ ದೂರಬಂದೆವೆಂದು ತಿಳಿಸುತ್ತಾನೆ. ಪ್ರೇಮಿಗಳು ತಾವಾಗಿಯೇ ಒಂದಾಗಿ ಬಂದಿರುವುದನ್ನು ಕಂಡು ಥೀಸಿಯಸ್‌ಗೆ ಸಂತೋಷವಾಗುತ್ತದೆ. ರಾಜನು ತನ್ನ ಮದುವೆಯ ಜೊತೆ ಇವರ ವಿವಾಹವು ನಡೆಯಲಿ ಎಂಬ ಅಭಿಪ್ರಾಯ ಹೊಂದುತ್ತಾನೆ. ಎಲ್ಲರೂ ದೊರೆಯನ್ನು ಹಿಂಬಾಲಿಸಿ ಅಥೆನ್ಸ್ ಕಡೆ ಹೊರಡುತ್ತಾರೆ. ಬಾಟಮ್ ನಿದ್ದೆಯಿಂದ ಎಚ್ಚರಗೊಳ್ಳುತ್ತಾನೆ. ಕ್ವಿನ್ಸ್‌ನ ಮನೆಯಲ್ಲಿ ಬಾಟಮ್ ಕಾಣೆಯಾಗಿರುವ ವಿಚಾರ ಚರ್ಚೆಯಾಗುತ್ತದೆ. ಅಷ್ಟರಲ್ಲಿ ಬಾಟಮ್‌ನು ಪ್ರವೇಶಿಸುತ್ತಾನೆ. ನಿನ್ನೆ ರಾತ್ರಿಯ ಕಥೆಯನ್ನು ನಂತರ ಹೇಳ್ತೀನಿ. 'ನಾಟಕದ ಸಿದ್ಧತೆ' ನಡೆಯಲಿ ಎಂದು ಎಲ್ಲರನ್ನು ಕರೆದೊಯ್ಯುತ್ತಾನೆ.

## 5ನೇ ಅಂಕ

ಥೀಸಿಯಸ್ ಮತ್ತು ಹಿಪಾಲಿಟಿಯವರ ಮದುವೆ ಸುಸೂತ್ರವಾಗಿ ನಡೆಯಿತು. ರಾಜನ ಆಹ್ವಾನದ ಮೇರೆಗೆ ನವದಂಪತಿಗಳಾದ ಡೆಮಿಟ್ರಿಯಸ್ ಮತ್ತು ಹೆಲನ್, ಲೈಸ್ಯಾಂಡರ್ ಮತ್ತು ಹರ್ಮಿಯಾ ಅರಮನೆಯನ್ನು ಪ್ರವೇಶಿಸುತ್ತಾರೆ. ರಾಜನು ಫಿಲಾಸ್ಟ್ರೇಟರ್‌ನನ್ನು ಮನರಂಜನೆಯ ಬಗ್ಗೆ ವಿಚಾರಿಸುತ್ತಾನೆ. ಅವನು ಕೂಲಿ ಕಾರ್ಮಿಕರ ನಾಟಕದ ವಿವರ ನೀಡುತ್ತಾನೆ. ರಾಜನು ನಾಟಕ ನೋಡಲು ಬಯಸುತ್ತಾನೆ.

ಪಿರಮಿಸ್ ಮತ್ತು ಥಿಸ್ಬಿ ನಾಟಕ ಆರಂಭವಾಗುತ್ತದೆ. ನಾಯಕ–ನಾಯಕಿಯರು ಗೋಡೆಯ ಚಿಕ್ಕ ರಂಧ್ರದಲ್ಲಿ ಮಾತನಾಡುತ್ತಾರೆ. ನೈಸನ್‌ನ ಗೋರಿಯ ಬಳಿ ಸಂಧಿಸಲು ಹೊರಟಾಗ ಪಿರೇಮಸ್ ತನ್ನ ಪ್ರೇಯಸಿಯ ವಸ್ತ್ರವನ್ನು ನೋಡಿ ನನ್ನ ಮನದನ್ನೆಗೆ ಅನಾಹುತವಾಗಿದೆ ಎಂದು ತಿಳಿಯುತ್ತಾನೆ. ತನ್ನ ಖಡ್ಗದಿಂದ ಇರಿದುಕೊಂಡು ಪಿರಮಿಡ್ ಸಾಯುತ್ತಾನೆ. ಅಷ್ಟರಲ್ಲಿ ಥಿಸ್ಬಿ ಬರುತ್ತಾಳೆ ಪಿರಮಿಡ್ ಪಾರ್ಥಿವ ಶರೀರವನ್ನು ನೋಡಿ ತಾನು ಅದೇ ಖಡ್ಗದಿಂದ ತನ್ನನ್ನು ಇರಿದುಕೊಂಡು ಸಾಯುತ್ತಾಳೆ. ಕಡೆಯಲ್ಲಿ ಥೀಸಿಯಸ್ ಸಲಹೆಯ ಮೇರೆಗೆ ಇಬ್ಬರು ನಕಲಿಗಳು ಕುಣಿಯುತ್ತಾರೆ ಓಬೆರಾನ್ ಮತ್ತು ಟೈಟಾನಿಯರ ಹಾಡು ಕುಣಿತದೊಂದಿಗೆ, ಮತ್ತು ಅವರ ಮಾತಿನೊಂದಿಗೆ ನಾಟಕ ಮುಗಿಯುತ್ತದೆ.

## II. 'ಪ್ರಮೀಳಾರ್ಜುನೀಯ' ನಾಟಕದ ಕಥಾವಸ್ತು

### 1ನೇ ಅಂಕ

ನಟಿ ಮತ್ತು ಸೂತ್ರಧಾರ ಮಾತಿನೊಂದಿಗೆ ಸಂಭಾಷಣೆ ಆರಂಭವಾಗುತ್ತದೆ. ಅರ್ಜುನನು ತನ್ನ ಅಣ್ಣನ ಯಾಗದ ಕುದುರೆಯನ್ನು ಬಿಡಿಸಿಕೊಂಡು ಹೋಗಲು ಮಲೆಯಾಳ ರಾಜ್ಯಕ್ಕೆ ಬಂದಿದ್ದಾನೆ. ಪ್ರಮೀಳಾದೇವಿಯಿಂದ ಕುದುರೆಯನ್ನು ಬಿಡಿಸಲು ಅರ್ಜುನನಿಗೆ ಸಾಧ್ಯವಿಲ್ಲವೆಂಬ ಅಭಿಪ್ರಾಯ ಸೂತ್ರಧಾರನದು. ಯುದ್ಧವು ಪ್ರಣಯ ಕಲಹದಂತೆ ಪೂರೈಸಿದೆ, ನಂತರ ಪ್ರಮೀಳಾದೇವಿಯ ರಥದಲ್ಲಿ ಅರ್ಜುನ ಬರುತ್ತಾನೆ. ಪ್ರಮೀಳಾರ್ಜುನರು ಪರಸ್ಪರ ಮೋಹಕ್ಕೆ ಒಳಗಾಗುತ್ತಾರೆ. ಪ್ರಮೀಳೆಯು ಶರೀರವನ್ನರ್ಪಿಸಿ ಶರಣಾಗತಳಾದಾಗ, ಅರ್ಜುನನು ಅವಳನ್ನು ಗಾಂಧರ್ವ ವಿವಾಹವಾಗಲು ಬಯಸುತ್ತಾನೆ. ಆದರೆ ಪ್ರಮೀಳೆಗೆ ಅಗ್ನಿಸಾಕ್ಷಿಯಾಗಿ ವಿವಾಹವಾಗುವ ಬಯಕೆ. ಅಗ್ನಿಸಾಕ್ಷಿಯಾಗಿ ವರಿಸಲು ಅರ್ಜುನನಿಗೆ ಸಮಯವಿಲ್ಲ. ಪೂರ್ಣಚಂದ್ರೋದಯದ ದಿನ ನನ್ನನ್ನು ನೀನು ವಿವಾಹವಾಗಲು ಒಳ್ಳೆಯ ದಿನವಾಗಿರುವುದೆಂದು ಪ್ರಮೀಳೆ ಅವನಿಗೆ ಹೇಳುತ್ತಾಳೆ. ಪ್ರಮೀಳೆಯು ಸಾರಥಿಯನ್ನು ಕರೆದು, ಪುರವನ್ನು ಶೃಂಗಾರ ಮಾಡುವಂತೆ ಹಾಗೂ ವಿನೋದದ ಕಾರ್ಯಗಳನ್ನು ಸಿದ್ಧಪಡಿಸಿಕೊಳ್ಳವುದಕ್ಕೆ ಆಜ್ಞೆ ಮಾಡುತ್ತಾಳೆ.

ಮೇನವನು ರಾಣಿಯ ಬಳಿಗೆ ದೂರನ್ನು ತರುತ್ತಾನೆ. ಈ ಜಯಂತನು ನನ್ನ ಮಗಳನ್ನು ಮರುಳುಮಾಡಿದ್ದಾನೆ. ನಮ್ಮ ದೇಶದ ಪದ್ಧತಿಯಂತೆ, ಇವಳಿಗೆ ಶಿಕ್ಷೆಯಾಗಲಿ, ಎಂದು ಪ್ರಾರ್ಥಿಸುತ್ತಾನೆ. ತಂದೆಯಲ್ಲಿ ಗೌರವವಿಟ್ಟು ನಡೆದಿಕೊ, ಇಲ್ಲದಿದ್ದರೆ ದಂಡನೆಗೆ ಗುರಿಯಾಗುವೆ ಎಂದು ಪ್ರಮೀಳೆಯು ಕೈರವೆಗೆ ಬುದ್ಧಿ ಹೇಳುತ್ತಾಳೆ. ಪೂರ್ಣಚಂದ್ರೋದಯದ ದಿವಸ ಈಗಾಗಲೇ ಪ್ರಮೀಳಾರ್ಜುನರ ವಿವಾಹ ನಿರ್ಧಾರವಾಗಿರುವುದರಿಂದ ಈ ನಾಲ್ಕು ದಿನಗಳೊಳಗೆ ನಿರ್ಧಾರ ತಿಳಿಸಲು ಕೈರವೆಗೆ ಅವಕಾಶ ನೀಡುತ್ತಾಳೆ. ಕೈರವೆಯು ಜಯಂತನನ್ನೇ ವಿವಾಹವಾಗಲು ಬಯಸುತ್ತಾಳೆ. ಪದ್ಮಿನಿಯು ವಸಂತನನ್ನು ವರಿಸಲು ಸಿದ್ಧಳಿರುವ ವಿಚಾರವನ್ನು ಜಯಂತನು ಪ್ರಮೀಳೆಗೆ ತಿಳಿಸುತ್ತಾನೆ. "ಮೇನವ ವಸಂತರೆ ನನ್ನ ಜೊತೆ ಬನ್ನಿ ಮಾತನಾಡಬೇಕು. ನಿಮ್ಮಿಂದ ನನ್ನ ವಿವಾಹಕ್ಕೆ ಸಹಾಯವಾಗಬೇಕಾಗಿದೆ" ಎಂದು ಪ್ರಮೀಳಾ ಅವರನ್ನು ಕರೆದೊಯ್ಯುತ್ತಾಳೆ.

ಈ ಬೆಳವಣಿಗೆಯಿಂದ ಬೇಸರಗೊಂಡ ಪ್ರೇಮಿಗಳು ಚರ್ಚಿಸುತ್ತಾರೆ. ಜಯಂತನು ಕೇರಳ ದೇಶದಲ್ಲಿ ನಮ್ಮ ಚಿಕ್ಕಮ್ಮಳೊಬ್ಬಳಿದ್ದಾಳೆ. ಅವಳಿಗೆ ಮಕ್ಕಳಿಲ್ಲ. ನನ್ನನ್ನೆ ಮಗನಂತೆ ಪ್ರೀತಿಸುತ್ತಿದ್ದಾಳೆ. ಎರಡು ಗಾವುದ ದೂರದಲ್ಲಿರುವ ಅಲ್ಲಿಗೆ ಮಲೆಯಾಳದ ಪದ್ಧತಿ ಅನ್ವಯಿಸುವುದಿಲ್ಲ. ನನ್ನ ಮೇಲೆ ನಿನಗೆ ವಿಶ್ವಾಸವಿದ್ದರೆ ಈ ರಾತ್ರಿ ನಿಮ್ಮ ತಂದೆಯ

ಮನೆಯನ್ನು ಬಿಟ್ಟು ಬಾ, ನಾವಿಬ್ಬರು ನನ್ನ ಚಿಕ್ಕಮ್ಮನ ಮನೆಯಲ್ಲಿ ಸುಖದಿಂದಿರೋಣ ಎನ್ನುತ್ತಾನೆ. ಕೈರವೆಯು ಸಮ್ಮತಿಸುತ್ತಾಳೆ. ಅಷ್ಟರಲ್ಲಿ ಅರಣ್ಯಕ್ಕೆ ಪದ್ಮಿನಿಯು ಬರುತ್ತಾಳೆ. ನಾನು ಅಪರಾಧ ಮಾಡಿದವಳಲ್ಲವೆನ್ನುತ್ತಾಳೆ. ಕೈರವೆಯು, ಜಯಂತನೂ ನಾನು ಪಟ್ಟಣವನ್ನು ಬಿಟ್ಟು ಹೊರಟುಹೋಗುವುದಾಗಿ ಅವಳಿಗೆ ತಿಳಿಸುತ್ತಾಳೆ. ಪದ್ಮಿನಿಯು ಕೈರವೆಯ ಪಲಾಯನದ ವಿಚಾರವನ್ನು ವಸಂತನಿಗೆ ತಿಳಿಸಲು ನಿರ್ಧರಿಸುತ್ತಾಳೆ. ಈ ಸಂದರ್ಭದಲ್ಲಿ ಸವಿಮಾತುಗಳನ್ನು ಕೇಳಿ ನಾನು ಸುಖಿಸುತ್ತೇನೆ ಎಂದು ಪದ್ಮಿನಿ ಆಲೋಚಿಸುತ್ತಾಳೆ. ರಾಣಿಯ ಮದುವೆಯ ದಿನ ಹಾಸ್ಯಕಾರ್ಯಕ್ಕೆ ಬಹುಮಾನ ಕೊಡುತ್ತಾರೆ. ಎನ್ನುವ ವಿಷಯ ಮಾಯಾಚಾರಿಗೆ ತಲುಪುತ್ತದೆ. ತನ್ನ ಹುಡುಗರನ್ನೆಲ್ಲ ಕಟ್ಟಿಕೊಂಡು ನಾಟಕ ಕಲಿಯಲು ಅವನು ಚರ್ಚಿಸುತ್ತಾನೆ. ಪಾತ್ರ ಹಂಚುವ ಕೆಲಸ ನಡೆಯುತ್ತದೆ. 'ಸಮಾಧಿಪರಿಣಯ' ನಾಟಕದ ಕಥೆಯನ್ನು ಆಯ್ದುಕೊಂಡಿದ್ದಾನೆ.

## 2ನೇ ಅಂಕ

ಕಾಡಿನಲ್ಲಿ ಅಶುಗ ಮತ್ತು ಖೇಚರಿ ಭೇಟಿಯಾಗುತ್ತಾರೆ. ಈ ಪ್ರದೇಶಕ್ಕೆ ಮನ್ಮಥರಾಜನು ಬರುತ್ತಾನೆ. ಗಂಧರ್ವಬಾಲಕನನ್ನು ತನ್ನ ಬಳಿ ಹೂ' ಮುಡಿಸುವುದಕ್ಕೆ ಮಡಗಿಕೊಂಡಿರುವ ರತಿದೇವಿಯನ್ನು ಕಂಡರೆ ಅವನಿಗಾಗುವುದಿಲ್ಲ. "ಅವರಿಬ್ಬರು ಭೇಟಿಯಾದ ಕಡೆಯಲ್ಲಿ ಜಗಳಗಳಾಗುವುವು. ಅಷ್ಟರಲ್ಲಿ ರತಿ ಮನ್ಮಥರು ಆಗಮಿಸುತ್ತಾರೆ. ಮನ್ಮಥ ಬಾಲಗಂಧರ್ವನನ್ನು ಕೊಡುವಂತೆ ರತಿಯನ್ನು ಕೇಳಿಕೊಳ್ಳುತ್ತಾನೆ. ರತಿಯು ಆ ವಿಷಯವನ್ನು ಪ್ರಸ್ತಾಪಮಾಡಬೇಡ, ಚಂದ್ರೋದಯದಲ್ಲಿ ನನ್ನೊಂದಿಗೆ ನರ್ತಿಸಲು ನಿನಗೆ ಇಷ್ಟವಿದ್ದರೆ ಬಾ ಎನ್ನುತ್ತಾಳೆ. ಅವಳ ಗರ್ವವನ್ನು ಅಡಗಿಸಲು ಮನ್ಮಥನು ಯೋಜನೆ ರೂಪಿಸುತ್ತಾನೆ.ತನ್ನ ಸಾರಥಿಯನ್ನು ಕರೆದು, ಹಿಮಾಚಲದಲ್ಲಿ ಗಿರಿಜಾತೆ ತಪಸ್ಸು ಮಾಡುತ್ತಿದ್ದ ತಪ್ಪಲಲ್ಲಿ ಒಂದು ಅಮೃತ ಸರೋವರವಿದೆ. ಆ ಸರೋವರದ ತೀರದಲ್ಲಿ ಒಂದು 'ನೀಲೋನ್ಮತ್ತದ' ಗಿಡವಿದೆ ಅದರಲ್ಲಿರುವ ಹೂವನ್ನು ಜೋಪಾನವಾಗಿ ತೆಗೆದುಕೊಂಡು ಬಾ ಎಂದು ಜವಾಬ್ದಾರಿ ವಹಿಸುತ್ತಾನೆ.

ವಸಂತನು ಅರಣ್ಯದ ಕಡೆಗೆ ಹೆಜ್ಜೆಯಿಡುತ್ತಾನೆ. ಅವನನ್ನು ಪದ್ಮಿನಿಯು ಹಿಂಬಾಲಿಸುತ್ತಾಳೆ. ವಸಂತನು ಪದ್ಮಿನಿಗೆ ನಿನಗೆ ಮರ್ಯಾದೆಯಿಲ್ಲ, ಮನೆಬಿಟ್ಟು ನಿನ್ನಲ್ಲಿ ಗೌರವವಿರದ ಯುವಕನನ್ನು ನಿರ್ಜನ ಪ್ರದೇಶದಲ್ಲಿ ಸಂಧಿಸಲು ನಾಚಿಕೆಯಾಗುವುದಿಲ್ಲವೆ? ಎಂದು ಪ್ರಶ್ನಿಸಿ, ಹೊರಡಲು ಸಿದ್ಧವಾದಾಗ ನನ್ನಾಣೆ ಹೋಗಬೇಡವೆಂದು ಪದ್ಮಿನಿ ವಿನಂತಿಸಿಕೊಳ್ಳುತ್ತಾಳೆ. ಇದೆಲ್ಲವನ್ನು ಮನ್ಮಥ ಗಮನಿಸುತ್ತಾನೆ. ಅಷ್ಟರಲ್ಲಿ ಅಶುಗ ತನ್ನ ಕಾರ್ಯವನ್ನು ಪೂರೈಸಿಕೊಂಡು ಬರುತ್ತಾನೆ. ಮನ್ಮಥನು ನೀಲೋನ್ಮತ್ತದ ಹೂವಿನ

ರಸವನ್ನು ರತಿದೇವಿಯ ಮೇಲೆ ಪ್ರಯೋಗಿಸುವಂತೆ ಅಶುಗನಿಗೆ ವಹಿಸುತ್ತಾನೆ. ಹಾಗೂ ಈ ವನದಲ್ಲಿ ಇಬ್ಬರು ಮಲೆಯಾಳದ ಸ್ತ್ರೀಪುರುಷರಿದ್ದಾರೆ. ಅವನು ಮಲಗಿರುವಾಗ ಹೂವಿನ ರಸವನ್ನು ಆ ಪುರುಷನ ಕಣ್ಣಿಗೆ ಹಿಂಡು ಅವನು ಎದ್ದಾಗ ಮೊದಲು ಆ ಸ್ತ್ರೀಯನ್ನೇ ಕಾಣುವಂತೆ ಎಚ್ಚರವಹಿಸು ಎಂದು ಅಶುಗನಿಗೆ ತಿಳಿಸುತ್ತಾನೆ.

ರತಿದೇವಿಯು ಹೂವಿನ ತೊಟ್ಟಿಲಲ್ಲಿ ಮಲಗಿಕೊಳ್ಳುತ್ತಾಳೆ. ಸಖಿಯರು ಲಾಲಿ ಹಾಡುತ್ತಾರೆ. ಮೊದಲೇ ಗೊತ್ತಾದಂತೆ ಪ್ರಯಾಣ ಬೆಳೆಸಿದ್ದ ಜಯಂತ ಮತ್ತು ಕೈರವೆ ವನಸಂಚಾರದಿಂದ ಆಯಾಸಗೊಂಡು ನಿದ್ದೆ ಹೋಗುತ್ತಾರೆ. ಈ ಕಡೆ ಪದ್ಮಿನಿಯು ವಸಂತನನ್ನು ಹಿಂಬಾಲಿಸುತ್ತಲೇ ಇದ್ದಾಳೆ. ವಸಂತ ಅವಳನ್ನು ಕಾಡಿನಲ್ಲೆ ಬಿಟ್ಟು ಹೊರಟು ಹೋಗುತ್ತಾನೆ. ನೀಲೋನ್ಮತ್ತ ಹೂವಿನ ಪ್ರಭಾವದಿಂದ ಜಯಂತ ಪದ್ಮಿನಿಯ ಮೇಲೆ ಮೋಹಗೊಳ್ಳುತ್ತಾನೆ. ಅಶುಗನು ಜಯಂತನನ್ನೆ ವಸಂತನೆಂದು ಗ್ರಹಿಸಿ ಅವನಿಗೆ ಪುಷ್ಪದ ಹನಿಯನ್ನು ಹಾಕಿದ್ದರಿಂದ ಅನಾಹುತ ಸಂಭವಿಸಿದೆ. ಪದ್ಮಿನಿಯು ಜಯಂತನನ್ನು ತಿದ್ದಲು ಪ್ರಯತ್ನಿಸುತ್ತಾಳೆ. ಆದರೆ ಮಲಗಿದ್ದ ಕೈರವೆಯನ್ನು ಗಮನಿಸದೆ ಜಯಂತ ಪದ್ಮಿನಿಯ ದಾರಿಹಿಡಿದು ಹೋಗುತ್ತಾನೆ. ಕೈರವೆಯು ಜಯಂತ ಇಲ್ಲದಿರುವುದನ್ನು ಗಮನಿಸಿ, ಅವನನ್ನು ಕೂಗಿ ಕರೆಯುತ್ತಾಳೆ. ಸುಳಿವು ಸಿಗದಿದ್ದಾಗ ನಿನ್ನನ್ನಾಗಲಿ ಮೃತ್ಯುವನ್ನಾಗಲಿ ಇನ್ನು ಹುಡುಕದೆ ಬಿಡುವುದಿಲ್ಲ ಎಂದು ನಿರ್ಧರಿಸಿಕೊಳ್ಳುತ್ತಾಳೆ.

## 3ನೇ ಅಂಕ

ವನದಲ್ಲಿ ರತಿದೇವಿಯು ಮಲಗಿರುವ ಪ್ರದೇಶದಲ್ಲಿ ಮಾಯಾಚಾರಿ ಮತ್ತು ಉಳಿದ ಪಾತ್ರಧಾರಿಗಳು ಸೇರುತ್ತಾರೆ. ನಾಯಕನು ನಾಟಕ ಅಭ್ಯಾಸದಲ್ಲಿ ನಿರತನಾಗಿದ್ದ ಮಾಚಯ್ಯ ಆಯಾಸಗೊಂಡು ನೀರು ಕುಡಿದು ಬರಲು ಹೊರಡುತ್ತಾನೆ. ಅಶುಗನು ಮಾಚಯ್ಯನ ತಲೆಗೆ ಕತ್ತೆ ಮುಖವಾಡ ಜೋಡಿಸುತ್ತಾನೆ. ಅವನನ್ನು ನೋಡಿದ ಕಲಾವಿದರೆಲ್ಲರೂ ದಿಕ್ಕು ಪಾಲಾಗಿ ಓಡುತ್ತಾರೆ. ರತಿದೇವಿಯು ತೊಟ್ಟಿಲಿನಿಂದ ಎಚ್ಚೆತ್ತು, ನೀಲೋನ್ಮತ್ತ ಹೂವಿನ ಮಹಿಮೆಯಿಂದ ಕತ್ತೆಯ ಮುಖವಾಡದ ಮಾಚಯ್ಯನಲ್ಲಿ ಅನುರಕ್ತಳಾಗುತ್ತಾಳೆ. ಅವನ ಮೈಮೇಲೆ ಕೈಹಾಕಿ, ಬಾ ಪುಷ್ಪಶಯನದಲ್ಲಿ ಕೂತುಕೊಂಡು ಉಯ್ಯಾಲೆಯಾಡೋಣವೆಂದು ಕರೆಯುತ್ತಾಳೆ. ಮಾಚಯ್ಯನು ನನ್ನನ್ನು ಬಿಟ್ಟು ಬಿಡು ಎಂದು ಬೇಡಿಕೊಳ್ಳುತ್ತಾನೆ.

ರತಿದೇವಿಯ ತನ್ನ ಸಖಿಯನ್ನು ಕರೆದು ಇವನನ್ನು ಕರೆದುಕೊಂಡು ಬನ್ನಿ ನಾನು ಸಂತೈಸಿ ಅನುರಾಗ ಬೇಡುತ್ತೇನೆ ಎನ್ನುತ್ತಾಳೆ. ಸಖಿಯರು ಕರೆದೊಯ್ಯುತ್ತಾರೆ.ಮನ್ಮಥ

ಮತ್ತು ಅಶುಗರ ಭೇಟಿಯಾಗುತ್ತದೆ. ಅಶುಗನು ರತಿದೇವಿ ಕತ್ತೆಮುಖದ ಮಾಚಯ್ಯನಲ್ಲಿ ಮೋಹಗೊಂಡಿದ್ದಾಳೆಂದು ತಿಳಿಸುತ್ತಾನೆ. ತನ್ನ ಸಾರಥಿಯ ಕಾರ್ಯವನ್ನು ಮನ್ಮಥ ಮೆಚ್ಚುತ್ತಾನೆ. ಕೈರವೆಯು ವಸಂತನನ್ನು ಕುರಿತು ರಾತ್ರಿ ಮಲಗಿದ್ದಾಗ ಜಯಂತನನ್ನು ಕೊಂದಿರುವೆಯಾ ಎಂದು ಪ್ರಶ್ನಿಸುತ್ತಾಳೆ. ನಾನು ಅಂತಹ ಪಾಪಿಯಲ್ಲ. ನನಗೆ ತಿಳಿದ ಮಟ್ಟಿಗೆ ಅವನು ಸತ್ತಂತಿಲ್ಲ ಎನ್ನುತ್ತಾನೆ. ಅಶುಗನು ತನ್ನ ಕಾರ್ಯ ಮುಗಿಸುತ್ತಾನೆ. ವಸಂತನು ಎಚ್ಚರವಾದಾಗ ಪದ್ಮಿನಿಯನ್ನು ಮೋಹಿಸುತ್ತಾನೆ. ಪದ್ಮಿನಿಯು ಎಲ್ಲರು ಒಟ್ಟಾಗಿ ನನ್ನನ್ನು ಹಾಸ್ಯ ಮಾಡುತ್ತಿದ್ದಾರೆಂದು ತಿಳಿಯುತ್ತಾಳೆ. ಅಷ್ಟರಲ್ಲಿ ಕೈರವೆಯ ಪ್ರವೇಶವಾಗುತ್ತದೆ. ಅವಳು ಜಯಂತನನ್ನು ತನ್ನನ್ನು ಏಕೆ ಬಿಟ್ಟುಬಂದೆ ಎಂದು ಪ್ರಶ್ನಿಸುತ್ತಾಳೆ. ಕೈರವೆ ಜಯಂತನ ಬಳಿ ಬಂದು ರಾತ್ರಿಯಿಂದೀಚೆಗೆ ಹೀಗೇಕೆ ಅನುರಾಗವಿಲ್ಲದವರಾದಿರಿ ಎಂದು ಕೈರವೆಯು ಕೇಳುತ್ತಾಳೆ. ಇದು ಪದ್ಮಿನಿಯ ಮಾಟವೆಂದು ಭಾವಿಸುತ್ತಾಳೆ. ಜಯಂತ ಮತ್ತು ವಸಂತರು ಜಗಳವಾಡುತ್ತಾರೆ. ಮನ್ಮಥನು ಅವರು ಮಲಗಿದಾಗ ಜಯಂತನ ಕಣ್ಣಿಗೆ ಹೂವಿನ ರಸಹಿಂಡುತ್ತಾನೆ. ಅವನು ಕೈರವೆಯಲ್ಲಿ ಮೋಹಗೊಳ್ಳುತ್ತಾನೆ. ನಂತರ ಎಲ್ಲರೂ ಒಂದಾಗುತ್ತಾರೆಂದು ಅಶುಗನಿಗೆ ಸಲಹೆ ನೀಡುತ್ತಾನೆ.

## 4ನೇ ಅಂಕ

ಮಾಚಯ್ಯನ ಮೇಲೆ ಮೋಹಗೊಂಡಿದ್ದ ರತಿದೇವಿಯು ಸಂಗಿತ ಹಾಡುವ ಉತ್ಸಾಹ ತೋರುತ್ತಾಳೆ. ಮಾಚಯ್ಯನಿಗೆ ಹಸಿವಾಗುತ್ತಿರುವುದರಿಂದ ಊಟಕ್ಕೆ ಸಿದ್ಧತೆ ನಡೆಯುತ್ತದೆ. ನಂತರ ರತಿದೇವಿಯು ತೊಡೆಯ ಮೇಲೆ ತಲೆಯಿಟ್ಟು ಮಾಚಯ್ಯ ನಿದ್ರಿಸುತ್ತಾನೆ. ರತಿದೇವಿಯು ಅವನೊಟ್ಟಿಗೆ ಮಲಗುತ್ತಾಳೆ. ಮನ್ಮಥನು ರತಿದೇವಿಯ ಸ್ಥಿತಿ ನೋಡಿ ಕನಿಕರ ಪಡುತ್ತಾನೆ. ಇತ್ತಕಡೆ ಪ್ರಮೀಳೆ ಮತ್ತು ಅರ್ಜುನರು ಬೇಟೆಯಾಡುತ್ತ ಬರುತ್ತಾರೆ. ಮನ್ಮಥನ ಹೂವಿನ ಬಾಣ ಅರ್ಜುನನ ಎದೆಗೆ ತಗಲುತ್ತದೆ. ಅರ್ಜುನನು ನಾನು ಸಹಿಸಿಕೊಳ್ಳಲಾರೆನೆಂದು ಹಲುಬುತ್ತಾನೆ. ಅರ್ಜುನನು ಮೂರು ಲೋಕಗಳು ನನ್ನ ಶತ್ರುಗಳಾಗಿ ಬರಲಿ, ಆದರೆ ಮನ್ಮಥನಿಗೆ ಅಂಗವಿಲ್ಲ, ಆಕಾರವಿಲ್ಲ, ಅವನು ಎಲ್ಲಿರುವನೋ? ಹೇಗಿರುವನೋ? ಯಾವಾಗ ಯಾವ ರೀತಿ ಬರುವನೋ? ಇಂಥವನ ಎದುರಿಗೆ ನನ್ನ ಪರಾಕ್ರಮವೇನು ನಡೆಯುವುದಿಲ್ಲವೆಂದು ಪ್ರಮೀಳೆಗೆ ತಿಳಿಸುತ್ತಾನೆ. ವಸಂತನಿಗೆ ಸ್ವಪ್ನಾವಸ್ಥೆಯಲ್ಲಿ ಮಹಾರಾಣಿಯನ್ನು ಕಂಡಂತೆ ಭಾಸವಾಗುತ್ತದೆ. ಅಷ್ಟರಲ್ಲಿ ಜಯಂತನು ರಾಣಿಯು ವಸಂತ ಮಂಟಪಕ್ಕೆ ನಮ್ಮನ್ನು ಕರೆದಿರುವೆಂದು ತಿಳಿಸುತ್ತಾನೆ. ವಸಂತ ಜಯಂತ ಕೈರವೆ ಪದ್ಮಿನಿಯರು ರಾಣಿಯ ಬಳಿಗೆ ಪ್ರಯಾಣ ಬೆಳಸುತ್ತಾರೆ.

ಮಾಚಯ್ಯನು ಎಚ್ಚರವಾಗಿ ನನ್ನ ಪಾರ್ಟುಬಂದಾಗ ಕರೆಯಿರಿ. ನಾನು ಹೇಳಬೇಕಾದದ್ದು ಇದೆ ಎಂದು ಸಂಭಾಷಣೆಯನ್ನು ನೆನಪಿಸಿಕೊಳ್ಳುತ್ತಾನೆ. ಮಾಯಾಚಾರಿಯ ಮನೆಯಲ್ಲಿ ಪಾತ್ರಧಾರಿಗಳು ಮಾಚಯ್ಯನಿಲ್ಲದಿರುವ ಬಗ್ಗೆ ಚಿಂತಿಸುತ್ತಾರೆ. ಅಷ್ಟರಲ್ಲಿ ಮಾಚಯ್ಯ ಪ್ರವೇಶಿಸುತ್ತಾನೆ. ಮಾಯಾಚಾರಿಯನ್ನು ಒಳಗೊಂಡಂತೆ ಎಲ್ಲರೂ ಹರ್ಷಪಡುತ್ತಾರೆ. ಮಾಚಯ್ಯನು ಪಾತ್ರಧಾರಿಗಳನ್ನು ಉಡುಗೆ ತೊಡುಗೆಗಳನ್ನು ತೊಟ್ಟು ಅರಮನೆಗೆ ಬಂದು ಸೇರಲು ಹೇಳುತ್ತಾನೆ.

## 5ನೇ ಅಂಕ

ಪೂರ್ವ ನಿರ್ಧಾರದಂತೆ ಪ್ರಮೀಳಾಗೆ ಮದುವೆಯಾಗುತ್ತದೆ. ಉಳಿದ ಎರಡು ಜೋಡಿಗಳು (ಪದ್ಮಿನಿ-ವಸಂತ ಜಯಂತ-ಕೈರವೆ) ವಿವಾಹವಾಗುತ್ತಾರೆ. ಸಂತೋಷಭರಿತರಾಗಿ ಬಂದ ಜಯಂತ, ಪದ್ಮಿನಿ, ವಸಂತ, ಕೈರವೆಯನ್ನು ಪ್ರಮೀಳೆ ಆತ್ಮೀಯವಾಗಿ ಬರಮಾಡಿಕೊಳ್ಳುತ್ತಾಳೆ. ತನ್ನ ಸಾರಥಿಯನ್ನು ಕರೆದು ಯಾವ ರೀತಿಯ ವಿನೋದ ಏರ್ಪಡಿಸಿದ್ದೀಯಾ ಎಂದು ಕೇಳುತ್ತಾಳೆ. ಸಾರಥಿ ನಾಟಕಗಳ ಪಟ್ಟಿ ನೀಡುತ್ತಾನೆ. 'ಪ್ರತಾಪರುದ್ರದೇವ' ಅನ್ನವನ್ನಿಟ್ಟು ಕತ್ತುಕುಯ್ಯುವುದು, ಈ ನಾಟಕವನ್ನೇನು ನೋಡುವುದು 'ಸಮಾಧಿಪರಿಣಯ', ರಾಮವರ್ಮ ಲೀಲಾವತಿಯ ಚರಿತ್ರೆ, ಅತ್ಯಂತ ಶೋಕಾನಂದ ಕರವಾದದ್ದು, ನೋಡಿದವರು ದಂಗಾಗುವರು ಇದು ಚೆನ್ನಾಗಿರುವುದಲ್ಲವೇ ಎಂದು ಪ್ರಮೀಳೆ ಸಾರಥಿಯನ್ನು ಕೇಳುತ್ತಾಳೆ.

ಸಾರಥಿಯು ಈ ನಾಟಕವನ್ನು ಊರಿನ ಕೆಲವು ವರಟುಜನರು ಬಹುಮಾನ ಪಡೆಯಬೇಕೆಂದು ಶ್ರಮವಹಿಸಿ ಕಲಿತಿದ್ದಾರೆ. ಅದರ ಯಜಮಾನ ಮಾಯಾಚಾರಿ ಎಂದು ತಿಳಿಸುತ್ತಾನೆ. ಅವನು ಮಾಡಿದ ನಾಟಕ ಚೆನ್ನಾಗಿರುತ್ತದೆ. ಅದನ್ನೇ ಆಡಿಸು ಎಂದು ಸೂಚಿಸುತ್ತಾಳೆ. ಹಾಗೆಯೇ ಎಲ್ಲರೂ ನಿಮ್ಮ ನಿಮ್ಮ ಮನಸ್ಸಿಗೆ ಬಂದಂತೆ ಕೂತು ನೋಡಿರೆಂದು ಅನುಮತಿ ನೀಡುತ್ತಾಳೆ. ಸೂತ್ರಧಾರನು ವಾರಣಾಸಿಯೆಂಬ ಪಟ್ಟಣದಲ್ಲಿ ಮಾಧುರನಿಗೆ ರಾಮವರ್ಮನೆಂಬ ಮಗನೂ, ಕಾಪಿಲನಿಗೆ ಲೀಲಾವತಿಯೆಂಬ ಮಗಳೂ ಇದ್ದರು, ತಂದೆಯಂದಿರು ದ್ವೇಷದಿಂದಾಗಿ ಪ್ರತಿನಿತ್ಯ ದೂರವಾಗುತ್ತಿದ್ದರು. ಅವರ ಮಕ್ಕಳಾದವರು ಪ್ರತಿಕ್ಷಣವೂ ವಿಶ್ವಾಸ ಹೆಚ್ಚುತ್ತ ಹತ್ತಿರವಾಗುತ್ತಿದ್ದರು. ಅಗ್ನಿ ಸಾಕ್ಷಿಯಾಗಿ ವಿವಾಹವಾಗುವುದಕ್ಕೆ ತಂದೆಯರು ಒಪ್ಪುವುದು ಅಸಾಧ್ಯವಾಗಿದ್ದರೂ, ಗಾಂಧರ್ವ ವಿವಾಹವು ಸುಗಮವಾಗಿ ನಡೆಯುತ್ತಿತ್ತು. ರಾಮವರ್ಮನಿಗೆ ದೊರೆ ಗಡಿಪಾರಾಗುವಂತೆ ಆಜ್ಞೆ ಮಾಡುತ್ತಾನೆ. ಲೀಲಾವತಿಗೆ ರಹಸ್ಯವಾಗಿ ತಿಳಿಸಿ ಹೋಗುವ ಪ್ರಯತ್ನಕ್ಕಾಗಿ ರಾಮವರ್ಮ ಅವಳು ಮಲಗಿರುವ ಕೊಠಡಿಯ ಕಿಟಕಿಗೆ ನೂಲಿನ ಏಣಿಯನ್ನು ಹಾಕಿ ಮೇಲಕ್ಕೆ ಹತ್ತಿ

ಸುಗ್ಗಿ ಒಳಗೆ ಬರುತ್ತಾನೆ. ಚಂದ್ರ ಕಿಟಕಿಗೋಡೆಗಳು ಕಾಣಿಸಿಕೊಳ್ಳುತ್ತವೆ. ಅರ್ಜುನನಿಗೆ ರಾಮವರ್ಮ ಲೀಲಾವತಿಯರ ಬಗ್ಗೆ ಆಶ್ಚರ್ಯವಾಗುತ್ತದೆ. ರಾಮವರ್ಮ ಲೀಲಾವತಿಯೊಡನೆ ಮಾತುಗಳನ್ನಾಡಿ ಮುದ್ದಿಟ್ಟು, ಈ ಕಿಟಕಿಯಲ್ಲಿ ಅಪ್ಪಣೆಯನ್ನು ತೆಗೆದುಕೊಳ್ಳುವನು. ರಾಮವರ್ಮ ಲೀಲಾವತಿ ಮತ್ತೆ ಪ್ರವೇಶಿಸುತ್ತಾರೆ. ಇಬ್ಬರು ಕುಣಿದು ಸಂಭ್ರಮಿಸುತ್ತಾರೆ. ಕೋಳಿ ಕೂಗಿದ ಮೇಲೆ ರಾಮವರ್ಮ ಹೊರಡಲು ಸಿದ್ಧನಾಗುತ್ತಾನೆ. ಲೀಲಾವತಿ ಕಾಲಿಗೆ ಬುದ್ಧಿಹೇಳು ಎಂದು ತಿಳುವಳಿಕೆ ನೀಡುತ್ತಾಳೆ. ಮಧ್ಯೆ ಕಿಟಕಿ ಗೋಡೆಗಳು ಬಂದು ನಿಲ್ಲುತ್ತವೆ. ಇಬ್ಬರು ಕಿಟಕಿ ಗೋಡೆಯನ್ನು ತಬ್ಬಿಕೊಂಡು, ರಾಮವರ್ಮ ಲೀಲಾವತಿಯ ತುಟಿಯನ್ನು ಕಿಟಕಿಯ ಕಂಬಿಗಳಲ್ಲಿ ತಡಕಾಡುತ್ತಾನೆ.

ಲೀಲಾವತಿ ತನ್ನ ತಂದೆ ನನಗೆ ಮತ್ತೊಂದು ಮದುವೆ ಮಾಡಲು ತಯಾರು ನಡೆಸಿದ್ದಾನೆಂದು ದುಃಖಿಸುತ್ತಾಳೆ. ಇರುವುದೊಂದೇ ಕುತ್ತಿಗೆ ಎಷ್ಟುಜನರ ಕೈಯಲ್ಲಿ ತಾಳೀ ಕಟ್ಟಿಸಿಕೊಳ್ಳಲಿ, ನೀನು ನನ್ನ ಗಂಡಾಂತರ ನೀಗದಿದ್ದರೆ ನಾನು ನನ್ನ ಗುಂಡಿಗೆಯನ್ನು ಸೀಳಿಕೊಳ್ಳುತ್ತೇನೆಂದು ತಿಳಿಸುತ್ತಾಳೆ. ರಾಮವರ್ಮ ಅಲ್ಲಿಗೆ ಬಂದು ನೆಲಮಾಳಿಗೆಯಲ್ಲಿ ಲೀಲಾವತಿಯ ಮೂರ್ಛೆಯ ದೇಹಕ್ಕೆ ಮುತ್ತಿಕ್ಕಿ ವಿಷ ಸೇವಿಸುತ್ತಾನೆ. ಲೀಲಾವತಿಗೆ ನಡೆದ ಸಂಗತಿ ತಿಳಿದು, ತನ್ನ ಗಂಡನ ಸೊಂಟದಲ್ಲಿ ಕಠಾರಿ ಸಿದ್ಧವಾಗಿರುವುದನ್ನು ಗಮನಿಸಿ, ಅದರಿಂದಲೇ ಸಾಯುತ್ತಾಳೆ. ರಾಮವರ್ಮ ಲೀಲಾವತಿ ತಮ್ಮಟೆಯ ಸದ್ದಲ್ಲಿ ಸುಗ್ಗಿ ಕುಣಿತ ಕುಣಿಯುತ್ತಾರೆ. ಪ್ರಮೀಳೆ ಸಖಿಯರ ಜೊತೆ ಸೇರಿ ಕೋಲಾಟವಾಡುತ್ತಾಳೆ ಅವರೊಂದಿಗೆ ಪದ್ಮಿನಿ, ಕೈರವೆಯರು ಸೇರಿಕೊಳ್ಳುತ್ತಾರೆ.

# III. 'ಪ್ರಮೀಳಾರ್ಜುನೀಯ' ನಾಟಕದ ಮುಖ್ಯ ಪಾತ್ರಗಳು

## ಪ್ರಮೀಳೆ

ಷೇಕ್ಸ್‌ಪಿಯರ್‌ನ ಅಥೆನ್ಸ್‌ನರಾಜ 'ಥೀಸಿಯಸ್' ನನ್ನು ಶ್ರೀಕಂಠೇಶಗೌಡರು ಮಲೆಯಾಳದ ರಾಣಿ ಪ್ರಮೀಳೆಯಾಗಿ ಬದಲಾಯಿಸಿಕೊಂಡಿದ್ದಾರೆ. ಇವಳು ಹೆಚ್ಚು ನೈಪುಣ್ಯವುಳ್ಳವಳಾಗಿದ್ದು ಪ್ರೀತಿಗೆ ಹೆಚ್ಚು ಬೆಲೆಕೊಡದೆ ಭಾವನೆಗಳಿಗೆ ಬೆಲೆ ಕೊಡುತ್ತಿದ್ದಳು. ಇವಳು ಆಡಳಿತ ಚತುರೆ, ಪ್ರಜೆಗಳ ಪ್ರೀತಿಗಳಿಸಿಕೊಂಡ ಸದ್ಗುಣ ಸಂಪನ್ನೆ. ಪ್ರಮೀಳೆಯು ತನ್ನ ಪ್ರಿಯತಮ ಅರ್ಜುನನನ್ನು ಮೆಚ್ಚಿಕೊಂಡು ಅವನನ್ನು ಅಗ್ನಿಸಾಕ್ಷಿಯಾಗಿ ವಿವಾಹವಾಗಲು ಬಯಸುತ್ತಾಳೆ. ಅರ್ಜುನನು ತಿಳಿಸಿದ ಗಾಂಧರ್ವ ವಿವಾಹ ಹೆಣ್ಣನ್ನು ವಂಚಿಸಲು ಸುಲಭ ಮಾರ್ಗವೆಂದು ತಿರಸ್ಕರಿಸಿ, ತನ್ನ ಆಸೆಗೆ ಸ್ಪಂದಿಸುವಂತೆ ಅರ್ಜುನನ ಮನಸ್ಸನ್ನು ಬದಲಾಯಿಸುತ್ತಾಳೆ. (ಪು–126–127) ಈ ಚಿತ್ರಣ ಷೇಕ್ಸ್‌ಪಿಯರ್‌ನಲ್ಲಿಲ್ಲ. ವಸಂತಮಂಟಪದಲ್ಲಿ ಪೂರ್ಣಚಂದ್ರೋದಯದ ದಿನ ವಿವಾಹಮಹೋತ್ಸವಕ್ಕೆ ಸಿದ್ಧತೆ ನಡೆಸುತ್ತಾಳೆ.

ಕೈರವೆ ವಸಂತನನ್ನು ಮದುವೆಯಾಗಲು ಒಪ್ಪದಿದ್ದಾಗ ರಾಣಿ ಪ್ರಮೀಳೆಯು "ಪುರುಷರ ಸಂಘವನ್ನು ತ್ಯಜಿಸಿ ಯೋಗಿನಿಯಾಗಬೇಕು. ಅದು ಅಸಾಧ್ಯವಾಗಿ ತೋರಿದರೆ ದೇಹವನ್ನು ತ್ಯಜಿಸಬೇಕು" ಎಂದು ಕೈರವೆಗೆ ಎಚ್ಚರಿಕೆ ನೀಡುತ್ತಾಳೆ. ಕಾನೂನು ವ್ಯವಸ್ಥೆಯಿಂದಾಗಿ ಹೆಣ್ಣುಮಕ್ಕಳು ತಂದೆಗೆ ಬೆಲೆಕೊಡಬೇಕೆಂಬ ನಿಲುವಿಗೆ ಬದ್ಧಳಾಗಿರುವ ಪ್ರಮೀಳೆ ಇಲ್ಲಿ ಕಾಣಿಸುತ್ತಾಳೆ. ಬೇಟೆಗಾಗಿ ಅರಣ್ಯಕ್ಕೆ ಬಂದಾಗ, ಮನ್ಮಥನ ಹೂಬಾಣಕ್ಕೆ ತಲ್ಲಣಿಸಿದ ಅರ್ಜುನನನ್ನು ನೋಡಿ "ಶರಘಾತಿಯನ್ನು ತೋರಿಸು ಮುದ್ದಿನಿಂದದಕ್ಕೆ ಮದ್ದನ್ನು ಮಾಡುವೆನು" (ಪು–185) ಎಂದು ಪ್ರಮೀಳೆ ಹೇಳುತ್ತಾಳೆ. ಈ ಮಾತುಗಳು ಮೂಲ ನಾಟಕದಲ್ಲಿ ಕಂಡುಬರುವುದಿಲ್ಲ. "ಭೂತ ಬೇತಾಳ ಮಾರಿ ಮಸಣಿ ಮೋಹಿನಿಯೆಂದು ಹೇಳುವ ಕಥೆಗಳನ್ನು ನಾನು ಎಂದಿಗೂ ನಂಬತಕ್ಕವಳಲ್ಲ" ಎಂಬ ಪ್ರಮೀಳೆಯ ಮಾತಿನಲ್ಲಿ ಭಾರತೀಯ ಸಂಸ್ಕೃತಿಯ ಹಿನ್ನೆಲೆಯಿದೆ. ನಾಟಕದ ಕೊನೆಯಲ್ಲಿ ಪ್ರಮೀಳೆಯು ಸ್ತ್ರೀ ಪರಿವಾರದವರ ಜೊತೆ ಸೇರಿ ಕೋಲಾಟವಾಡುತ್ತಾಳೆ (ಪು–205) ಮೂಲದಲ್ಲಿ ಕೇವಲ ಜಾನಪದ ನೃತ್ಯವನ್ನು ಏರ್ಪಡಿಸುವಂತೆ ಸೂಚಿಸಿದೆ. ಶ್ರೀಕಂಠೇಶಗೌಡರು ಸುಗ್ಗಿಕುಣಿತವನ್ನು ಬಣ್ಣಿಸಿದ್ದಾರೆ. ಶ್ರೀಕಂಠೇಶಗೌಡರ ಜಾನಪದ ಪ್ರೇಮಕ್ಕೆ ಇದು ನಿದರ್ಶನವಾಗಿದೆ. ಮಂಡ್ಯಕಡೆಯ ಜಾನಪದ ನೃತ್ಯದ ಸುಗ್ಗಿಕುಣಿತದ ನಿರೂಪಣೆ, ಕವಿಯೊಬ್ಬ ತನ್ನ ಬದುಕಿನ ಪರಿಸರದ ಪ್ರಭಾವದಿಂದ ತಪ್ಪಿಸಿಕೊಳ್ಳಲಾರ ಎಂಬುದಕ್ಕೆ ನಿದರ್ಶನವಾಗಿದೆ.

## ಕೈರವೆ

ಷೇಕ್ಸ್‌ಪಿಯರ್‌ನ 'ಹರ್ಮಿಯ' ಇಲ್ಲಿ ಕೈರವೆಯಾಗಿ ಬದಲಾಗಿದ್ದಾಳೆ. ಕೈರವೆಯು ಒಬ್ಬ ಸುಂದರ ಯುವತಿಯಾಗಿ ನಾಟಕದಲ್ಲಿ ಕಾಣಿಸಿಕೊಳ್ಳುತ್ತಾಳೆ. ಇವಳ ಸೌಂದರ್ಯಕ್ಕಾಗಿ ಪದ್ಮಿನಿ ಮತ್ಸರಪಟ್ಟ ಕೆಲವು ಸಂದರ್ಭಗಳಿವೆ. ಸ್ವಾಭಾವಿಕವಾಗಿ ಇವಳ ಮನಸ್ಸಿನಲ್ಲಿ ಧೃಡಸಂಕಲ್ಪವಿರುವುದನ್ನು ಕಾಣಬಹುದು. ಈ ದೃಢತೆಯಿಂದ ಕೆಲವು ಸ್ನೇಹಿತರೊಡನೆ ವಾದಕ್ಕೂ ಇಳಿದದ್ದು ಉಂಟು. ನಾವು ಈ ನಾಟಕದಲ್ಲಿ ಕಂಡುಕೊಳ್ಳುವ ವಿಷಯವೆಂದರೆ ಅವಳಲ್ಲಿ ಒತ್ತಡ ತರುವ ಅವಳ ತಂದೆಯ ನಡತೆ. "ನಮ್ಮ ತಂದೆ ನನ್ನ ಕಣ್ಣುಗಳಿಂದ ನೋಡಬಾರದೆ" ಎಂದು ಕೈರವೆ ಮರುಗುತ್ತಾಳೆ. ಇವಳಿಗೆ ಜಯಂತನಲ್ಲಿ ಮೋಹ, ಆದರೆ ವಸಂತ ಇವಳನ್ನು ಪ್ರೀತಿಸುತ್ತಿದ್ದಾನೆ. ಪದ್ಮಿನಿಗೆ ವಸಂತನಲ್ಲಿ ಪ್ರೀತಿಯಿದೆ ಇಲ್ಲಿ ತ್ರಿಕೋಣ ಪ್ರೇಮ ನಿರೂಪಿತವಾಗಿದೆ.

ಜಯಂತನು ತನ್ನನ್ನು ಬಿಟ್ಟು ಹೊರಟುಹೋದಾಗ, ಅವರು ವಸಂತನೊಂದಿಗೆ ಯುದ್ಧಕ್ಕೆ ನಿರ್ಧರಿಸಿದ್ದರೆ ದೇವರು ಅವರನ್ನು ಕಾಪಾಡಲಿ ಎಂದು ಬೇಡಿಕೊಳ್ಳುತ್ತಾಳೆ. ಮನ್ಮಥನ ಪುಷ್ಪಹನಿಯ ಪ್ರಭಾವದಿಂದಾಗಿ ಮತ್ತೆ ಜಯಂತನಲ್ಲಿ ಮೋಹಗೊಳ್ಳುತ್ತಾಳೆ. ಪ್ರಮೀಳೆಯ ಆಹ್ವಾನದ ಮೇರೆಗೆ ವಸಂತ ಮಂಟಪಕ್ಕೆ ಹೋಗಿ ತಂದೆಯ ಒಪ್ಪಿಗೆಯೊಂದಿಗೆ ಜಯಂತನನ್ನು ಮದುವೆಯಾಗುತ್ತಾಳೆ. ಈ ಮೂಲಕ ತನ್ನ ಬದುಕನ್ನು ಸಾರ್ಥಕಪಡಿಸಿಕೊಳ್ಳುತ್ತಾಳೆ. ಮೋಹ ಸೂತ್ರಧಾರಿಯಾಗಿ ಪಾತ್ರಗಳನ್ನು ಕುಣಿಸಬಲ್ಲದು ಎಂಬುದಕ್ಕೆ ಕೈರವೆ ಪಾತ್ರ ಒಂದು ನಿದರ್ಶನವಾಗಿದೆ.

## ಪದ್ಮಿನಿ

ಷೇಕ್ಸ್‌ಪಿಯರ್‌ನ 'ಹೆಲೆನ್' ಇಲ್ಲಿ ಪದ್ಮಿನಿಯಾಗಿ ಚಿತ್ರಿತವಾಗಿದ್ದಾಳೆ. ಪದ್ಮಿನಿಯ ಪಾತ್ರವು ಕೈರವೆ ಪಾತ್ರಕ್ಕಿಂತ ಹೆಚ್ಚು ರಸವತ್ತಾಗಿದೆ. ಇವಳು ಕೈರವೆಗಿಂತ ಅನೇಕ ವಿಷಯಗಳಲ್ಲಿ ಭಿನ್ನವಾಗಿದ್ದಾಳೆ. ಈಕೆಗೆ ತನ್ನ ಬಗ್ಗೆ ಹೆಚ್ಚಿನ ವಿಶ್ವಾಸವಿಲ್ಲ. ತನ್ನ ಮೊಂಡುವಾದವನ್ನು ಇತರರಲ್ಲಿ ಮಂಡಿಸುವಲ್ಲಿ ಯಶಸ್ಸನ್ನು ಗಳಿಸುತ್ತಿದ್ದಳು. ಆದರೆ ರಾತ್ರಿಯಲ್ಲಿ ಏಕಾಂಗಿ ಇರುವುದಕ್ಕೆ ತುಂಬಾ ಭಯಪಡುತ್ತಿದ್ದಳು. ಸ್ಪರ್ಧಾತ್ಮಕ ಜೀವನದಿಂದ ಹಿಂಜರಿಯುತ್ತಿದ್ದಳು. ಸ್ನೇಹಿತರುಗಳಿಗೆ ತೊಂದರೆ ನೀಡಿ ಸಂತೋಷ ಪಡುವಲ್ಲಿ ನಿಸ್ಸೀಮಳು. ಪದ್ಮಿನಿ ಅವಳ ಕೆಲವು ಸಂಭಾಷಣೆಯಲ್ಲಿ ವಿಭಿನ್ನಳು ಎಂದು ತೋರಿಸಿದ್ದಾಳೆ. ವಸಂತನು ಕೈರವೆಯಲ್ಲಿ ಮೋಹಗೊಂಡಿರುವುದರಿಂದ ಅವಳ ಮೇಲೆ ಪದ್ಮಿನಿಗೆ ಕೋಪವಿದೆ. ಆದರೆ ವಸಂತನನ್ನು ಒಲಿಸಿಕೊಳ್ಳಲು ಪ್ರಯತ್ನ ಮುಂದುವರಿಸುತ್ತಾಳೆ.

"ನನ್ನನ್ನು ನಿನ್ನ ನಾಯಿಯಂತಾದರೂ ಭಾವಿಸು ನಿನ್ನ ಜೂಲುನಾಯಿಯೆಂದರಿ. ಹೊಡಿ, ಬಡಿ, ಕೊಲ್ಲು ನಿನ್ನಲ್ಲೇ ವಿಶ್ವಾಸವಿಟ್ಟುಕೊಂಡು ನಿನ್ನ ಮೇಲೆ ಬಿದ್ದು ಸಾಯುತ್ತಿರುತ್ತೇನೆ" ಶ್ರೀಕಂಠೇಶಗೌಡರ ಈ ಮಾತುಗಳು ಜನ್ನನ ಯಶೋಧರಚರಿತೆಯ ಅಮೃತಮತಿಯ ಮಾತುಗಳನ್ನು ನೆನಪಿಸುತ್ತವೆ. ಮನ್ಮಥನ ಪುಷ್ಪಹನಿಯ ಮಹಿಮೆಯಿಂದಾಗಿ ಹಲವು ಸಮಸ್ಯೆಗಳನ್ನೆದುರಿಸುತ್ತಾ, ತನ್ನ ಹಟಸ್ವಭಾವದಿಂದಾಗಿ ವಸಂತನ ಮನಸ್ಸನ್ನು ಒಲಿಸಿಕೊಳ್ಳುವಲ್ಲಿ ಯಶಸ್ವಿಯಾಗುತ್ತಾಳೆ. ನಾರಿಯರಲ್ಲಿ ಪ್ರೇಮಸಾಧನೆ ಹಠಸಾಧನೆಯೂ ಆಗಿರಬಲ್ಲದು ಎಂಬುದಕ್ಕೆ ಪದ್ಮಿನಿ ಸಾಕ್ಷಿಯಾಗಿದ್ದಾಳೆ ಎನ್ನಬಹುದು.

## ಜಯಂತ

ಷೇಕ್ಸ್‌ಪಿಯರ್‌ನ 'ಲೈಸ್ಯಾಂಡರ್' ಇಲ್ಲಿ ಜಯಂತನಾಗಿದ್ದಾನೆ. ಜಯಂತನು ಕೈರವೆಯ ಪ್ರೇಯಸಿ. ಈತನ ಮಾತಿನಲ್ಲಿ ಅರ್ಹ, ಶ್ರೇಷ್ಠ ವ್ಯಕ್ತಿಯೆಂದು ತಿಳಿದು ಬರುತ್ತದೆ. ನಾಟಕದ ಮೊದಲೆ ಈತನ ಅಭಿಪ್ರಾಯ ಕೈರವೆಯ ಮೇಲೆ ಕಂಡುಬರುವುದನ್ನು ನೋಡಬಹುದು. ಇವನು ನಂಬಿಕೆ ದ್ರೋಹಿಯಲ್ಲ. ಆದರೆ ಕೆಲವುಸಂದರ್ಭದಲ್ಲಿ ತನ್ನ ಪ್ರೀತಿಯನ್ನು ಪದ್ಮಿನಿಯ ಕಡೆ ತಿರುಗಿಸುತ್ತಾನೆ. ರಾಣಿ ಪ್ರಮೀಳೆಯು ಕೈರವೆಗೆ ದಂಡನೆಗೆ ಗುರಿಮಾಡುವ ಸೂಚನೆ ಸಿಕ್ಕಾಗ ಜಯಂತನು ಕೇರಳದೇಶದ ತನ್ನ ಚಿಕ್ಕಮ್ಮನ ಮನೆಗೆ ಹೋಗುವ ಉಪಾಯ ಹುಡುಕುತ್ತಾನೆ. ನಂತರ ವನಸಂಚಾರದಲ್ಲಿ ಬಳಲಿರುವುದರಿಂದ ಅರಣ್ಯದ ಹುಲ್ಲುಹಾಸಿಗೆಯ ಮೇಲೆ ಪ್ರೇಮಿಗಳಿಬ್ಬರು ದೂರದೂರ ಮಲಗುತ್ತಾರೆ. ಮನ್ಮಥನ ಸಾರಥಿಯು ಹಾಕಿದ ಪುಷ್ಪದ ಹನಿಗಳಿಂದಾಗಿ ಇವನ ಬದುಕು ಗೊಂದಲದ ಗೂಡಾಗಿ ಪದ್ಮಿನಿಯಲ್ಲಿ ಮೋಹಗೊಳ್ಳುತ್ತಾನೆ.

ನಂತರ ಅಶುಗ ಜಯಂತನ ಕಣ್ಣಿಗೆ ಹೂವಿನ ರಸ ಹಿಂಡಿದಾಗ ಆತ ಕೈರವೆಯಲ್ಲಿಯೇ ಮೋಹಗೊಳ್ಳುತ್ತಾನೆ. ನಂತರ ಪ್ರಮೀಳೆಯ ಆಹ್ವಾನದ ಮೇರೆಗೆ ವಸಂತ ಮಂಟಪಕ್ಕೆ ಹೋಗಿ ಜಯಂತನು ಕೈರವೆಯನ್ನು ವಿವಾಹವಾಗುತ್ತಾನೆ. ದ್ವಂದ್ವ ಭಾವ ಪ್ರೇಮ ಪ್ರಸಂಗದಲ್ಲಿ ಸಿಲುಕಿದವರಲ್ಲಿ ಉಂಟಾದ ಮಾನಸಿಕ ಚಿತ್ರಣ ಹೇಗಿರುತ್ತದೆ ಎಂಬುದನ್ನು ಇಲ್ಲಿ ಕಾಣಬಹುದು. ಷೇಕ್ಸ್‌ಪಿಯರ್ ಪ್ರೇಮಿಗಳ ಮನಸ್ಸಿನ ಒಳದುಗುಡಗಳನ್ನು ತನ್ನ ನಾಟಕದಲ್ಲಿ ನಾನಾ ಬಗೆಗಳಲ್ಲಿ ನಾನಾ ಪಾತ್ರಗಳ ಮೂಲಕ ಚಿತ್ರಿಸುತ್ತಾನೆ. ಜಯಂತನದು ಅಂತಹ ಒಂದು ಪಾತ್ರ, ಅವನ ಪಾತ್ರ ವನ್ನು ಗೌಡರು ದೇಸೀಸೊಗಡಿನಲ್ಲಿ ಇಲ್ಲಿ ಚಿತ್ರಿಸಿದ್ದಾರೆ.

## ವಸಂತ

ಷೇಕ್ಸ್‌ಪಿಯರ್‌ನ 'ಡೆಮಿಟ್ರಿಯಸ್' ಇಲ್ಲಿ ವಸಂತನಾಗಿ ಕಾಣಿಸಿಕೊಂಡಿದ್ದಾನೆ. ವಸಂತ, ಜಯಂತನ ಪಾತ್ರಕ್ಕಿಂತ ಭಿನ್ನ. ಇತರ ವಿಷಯಗಳಲ್ಲಿ ಗೌರವವು ಮೂಡುತ್ತದೆ. ಒಂದೇ ಸಮನೇ ವಿಶ್ವಾಸವಿಲ್ಲದ ಪಾಪವನ್ನು ಪದ್ಮಿನಿಯ ವಿಷಯದಲ್ಲಿ ವ್ಯಕ್ತಪಡಿಸುವುದನ್ನು ನೋಡಬಹುದು. ಈತನಿಗೆ ಪೈಶಾಚಿಕ ವಿಷಯದಲ್ಲಿ ಶ್ರದ್ಧೆಯಿರುವುದನ್ನು ಪರಿಗಣಿಸಬಹುದಾಗಿದೆ. ವಸಂತನಿಗೆ ಕೈರವೆಯನ್ನು ಮದುವೆಯಾಗುವ ಅವಕಾಶವಿದೆ.ಆದರೆ ಪದ್ಮಿನಿ ವಸಂತನನ್ನು ಮೋಹಿಸುತ್ತಿದ್ದಾಳೆ. ಕೈರವೆಯು ಜಯಂತನನ್ನು ಇಚ್ಛೆಪಟ್ಟಿದ್ದಾಳೆ. ಅರಣ್ಯದಲ್ಲಿ ಪದ್ಮಿನಿ ವಸಂತನನ್ನು ಹಿಂಬಾಲಿಸಿ ಬರುತ್ತಾಳೆ. ನನ್ನ ಅಸೂಯೆಯನ್ನು ಕೆಣಕುತ್ತಿರಬೇಡ. ನಿನ್ನ ಮುಖವನ್ನು ನೋಡಿ ನನಗೆ ವಾಂತಿ ಬರುವುದೆಂದು ವಸಂತನು ತಿರಸ್ಕರಿಸುತ್ತಾನೆ. ಕೈರವೆಯು ವಸಂತನೆ ಜಯಂತನನ್ನು ಕೊಂದಿರಬಹುದೆಂದು ಸಿಟ್ಟಿಗೆದ್ದಾಗ ನಾನು ಕೊಂದಿಲ್ಲವೆಂದು ತಿಳಿಸಿ, ಅವನ ಶವಸಿಕ್ಕಿದರೂ ನಾಯಿನರಿಗಳಿಗೆ ಹಂಚುವ ಆಲೋಚನೆ ಮಾಡುತ್ತಾನೆ. ಮನ್ಮಥನ ಪುಷ್ಪಹನಿಯ ಮಹಿಮೆಯಿಂದ ಮತ್ತೆ ಪದ್ಮಿನಿಯಲ್ಲಿಯೇ ಮೋಹಗೊಳ್ಳುತ್ತಾನೆ. ನಂತರ ರಾಣಿ ಪ್ರಮೀಳೆಯ ಸಮ್ಮುಖದಲ್ಲಿ ಪದ್ಮಿನಿಯನ್ನು ಮದುವೆಯಾಗುತ್ತಾನೆ.

## ಅರ್ಜುನ

ಷೇಕ್ಸ್‌ಪಿಯರ್‌ನ 'ಹಿಪೋಲಿಟೆ'ಗೆ ಪರ್ಯಾಯವಾಗಿ ಶ್ರೀಕಂಠೇಶಗೌಡರು ಇಲ್ಲಿ ಅರ್ಜುನನನ್ನು ಹೊಸ ಪಾತ್ರವಾಗಿ ಸೃಷ್ಟಿಸಿದ್ದಾರೆ. ಈತ ಒಬ್ಬ ಸಮರ್ಥ, ಯೋಧ, ದಕ್ಷ, ಕರ್ತವ್ಯಪ್ರಜ್ಞ, ಒಬ್ಬ ಯೋಧನಾಗಿ ಅನೇಕ ದಿಗ್ವಿಜಯಗಳನ್ನು ಸಾಧಿಸಿದ್ದ ಮಹಾನ್ ಧೀಮಂತ ವೀರ. ಪ್ರಮೀಳೆ ಮತ್ತು ಅರ್ಜುನ ಪರಸ್ಪರ ಮೆಚ್ಚಿಕೊಂಡು, ಪ್ರಮೀಳೆ ಅಗ್ನಿಸಾಕ್ಷಿಯಾಗಿ ವಿವಾಹ ಮಾಡಿಕೊಳ್ಳಲು ಬಯಸಿದರೆ ಅರ್ಜುನನು ಗಾಂಧರ್ವ ವಿವಾಹಕ್ಕೆ ಮನಸ್ಸು ಮಾಡುತ್ತಾನೆ. ಅಣ್ಣ ಧರ್ಮಜನ ಯಾಗವನ್ನು ಪೂರೈಸಿ ಮತ್ತೆ ಬಂದು ವರಿಸುವೆನೆಂದು ಅರ್ಜುನನು ನುಡಿಯುತ್ತಾನೆ. ಈ ಭಾಗವನ್ನು ಪ್ರಾರಂಭದಲ್ಲಿಯೇ ಶ್ರೀಕಂಠೇಶಗೌಡರು ತಂದಿದ್ದಾರೆ. ಆದರೆ ಷೇಕ್ಸ್‌ಪಿಯರ್‌ನಲ್ಲಿ ಈ ಚಿತ್ರಣವಿಲ್ಲ. ನಂತರ ವಸಂತಮಂಟಪದಲ್ಲಿ ಇವರಿಬ್ಬರ ಮದುವೆ ನಡೆಯುತ್ತದೆ. ಪ್ರಮೀಳೆಯ ಪ್ರೇಮಿಯಾಗಿ ಅರ್ಜುನ ಇಲ್ಲಿ ಯಶಸ್ವಿಯಾಗಿದ್ದಾನೆ. ಶ್ರೀಕಂಠೇಶಗೌಡರ ಆದರ್ಶನಾಯಕರುಗಳಲ್ಲಿ ಈತ ಒಬ್ಬ ಎಂಬುದು ಕಂಡುಬರುತ್ತದೆ.

## IV. 'ಪ್ರಮೀಳಾರ್ಜುನೀಯಂ' ನಾಟಕದ ಭಾಷಾಶೈಲಿ ಮತ್ತು ಛಂದಸ್ಸು

ಶ್ರೀಕಂಠೇಶಗೌಡರು ಗ್ರಾಮೀಣ ಜನರ ಒಡನಾಡಿಗಳು. ವಸ್ತು ಮತ್ತು ಪಾತ್ರಗಳಿಗೆ ತಕ್ಕಂತೆ ಭಾಷೆಯನ್ನು ಬಳಸುವ ಶಕ್ತಿ ಅವರಿಗಿತ್ತು. ಒಂದೊಂದು ಪಾತ್ರಗಳು ಒಂದೊಂದು ಶೈಲಿಯಲ್ಲಿ ಮಾತಾಡುವ ಷೇಕ್ಸ್‌ಪಿಯರ್ ತಂತ್ರಕ್ಕೆ ಬಗ್ಗಿಕೊಂಡವರು.ಶಿಷ್ಟ ಮತ್ತು ಗ್ರಾಮ್ಯ ಭಾಷೆಗಳ ಸಂಗಮ ಇವರ ಶೈಲಿ. ನಿಜವಾದ ಕಾಳಜಿಯಿಂದ ಈ ನಾಟಕಗಳಲ್ಲಿ ಪ್ರತಿಭೆಯನ್ನು ಮೆರೆದಿದ್ದಾರೆ. ಶಿಷ್ಟ ಮತ್ತು ಗ್ರಾಮ್ಯ ಪಾತ್ರಗಳು ಸಹಜವಾಗಿಯೇ ಕಥೆಯ ಹಂದರವನ್ನು ಮುಂದುವರಿಸಿಕೊಂಡು ಹೋಗುತ್ತವೆ. ಪದಸಂಪತ್ತು ಕೃತಿಯ ರಚನೆಯ ಮೆರಗನ್ನು ಹೆಚ್ಚಿಸಬಲ್ಲವು.

### 1) (ಅ). ಗ್ರಾಮೀಣ ಭಾಷಾಬಳಕೆ.

ಗ್ರಾಮೀಣ ಪರಿಸರದಲ್ಲಿ ವಿಶೇಷವಾಗಿ ಮಂಡ್ಯ ಪ್ರಾಂತ್ಯದಲ್ಲಿ ಹೆಚ್ಚಾಗಿ ಕಾಣುವ ಹಲವು ಬಳಕೆ ಪದಗಳನ್ನು ನಾವು ಕಾಣಬಹುದು. ಈ ಪದ ಪ್ರಯೋಗಗಳಿಂದ ನಾಟಕದ ಸೊಬಗು ಮತ್ತಷ್ಟು ಹೆಚ್ಚಿದೆ. ಪ್ರತಾಪರುದ್ರದೇವಕ್ಕಿಂತಲೂ ಹೆಚ್ಚು ಗ್ರಾಮ್ಯ ಪದಗಳ ಬಳಕೆ ಇಲ್ಲಿದೆ.– **ಉದಾಹರಣೆಗೆ:–** ಮಣ್ಯಾತಗಿತ್ತಿ (ಪುಟ124), ವರಟಾಟ(130), ಅಂತಾವನೆ(130), ಗಾವುದ(134), ಹೊರ್ತು(136), ಪುರಸತ್ತೆಲ್ಲಿ(137), ಐನಾತಿ(137), ಡಂಗ್‌ಆಗಿಬಿಟ್ಟರು(138), ಸಿಸ್ತಗಾರನಾಗಿ(138), ಅಟ್ಟಾಡೋದು(139), ಮೂದೇವಿ(139), ಇಲ್ಲಿವ್ನಿ(139), ಇರೋದ್ಯಾತಕ್ಕೆ(139), ಗಂಟ್ಲಗಿರಸ(139), ಲಾಗಾಯಿತು(142), ಮಾನಗೇಡಿ(145), ತೊಲಗು(146), ದಿಂಬು(148), ಬಾತುಕೊಂಡಿರುವೆಯಾ(152), ಹಡಪ(153), ಹ್ಯಾಗೆ(156), ಹೋದಾತು(159), ಕಾಣೆ(163), ಪೋಟಿಗಾರರು(165), ಬೈಲಾಗಿ ಹೋಯಿತು(166), ಗುಜ್ಜಾರಿ(170), ತಿರಗ(170), ಮುಲುಗುಟ್ಟುತ್ತಿರುವುದು(176), ಕರುಂಕರುಮನೆ(177), ಹೋಗ್ಲ(180), ಹೈದ್ದೀರಿಗೆ(181), ಈ ಹೊತ್ತಿರತಾವೆ(181), ಚಾಲಕ್ಕಾರ(189), ನಿಗರಿಸಿಬಿಟ್ಟನು(196), ಹೊಡೇಲ ತಂಬಟೆ(204)

### (ಆ) ಸಂಸ್ಕೃತ ಪದಗಳು

ಮೊದಲೇ ಚರ್ಚಿಸಿದಂತೆ, ಸಂಸ್ಕೃತದ ಮೇಲೆ ಪ್ರಭುತ್ವದ ಜೊತೆಗೆ ವ್ಯಾಮೋಹವನ್ನು ಹೊಂದಿರುವವರು ಶ್ರೀಕಂಠೇಶಗೌಡರು. ಇಲ್ಲಿ ಕೆಲವು ಸಂಸ್ಕೃತ ಪದ ಪ್ರಯೋಗಗಳನ್ನು ಗುರುತಿಸಬಹುದು. ಕನ್ನಡ ಪ್ರೀತಿಯನ್ನು ಇರಿಸಿಕೊಂಡಿದ್ದರೂ ಸಂಸ್ಕೃತ ಭಾಷೆಯ ಪಾಂಡಿತ್ಯದಿಂದ ಹಿಂದೆ ಸರಿಯಲು ಅವರಿಗೆ ಸಾಧ್ಯವಾಗಿಲ್ಲ. ಆದ್ದರಿಂದ ಸಂಸ್ಕೃತ ಪದಗಳು ಸಾಕಷ್ಟು ಪ್ರಯೋಗವಾಗಿರುವುದನ್ನು ಕಾಣಬಹುದು.

**ಉದಾಹರಣೆ**:– ಅಗ್ನಿ ಸಾಕ್ಷಿಕ(ಪುಟ–126), ಮಂಗಳಾರತಿ(134), ಸ್ವಸ್ಥ(154), ಪಂಚಾಂಗ(155), ಪುಷ್ಪಶಯನ(158), ವ್ಯಾಕುಲ ಹೃದಯ(163), ಸತ್ಕುಲಪ್ರಸೂತ(165), ನಿಷ್ಕ್ರಾಂತಾಃ(169), ವಾಗ್ಧರಿ(195), ವಾಕ್ಪಟುತ್ವ(195),

**(ಇ) ದ್ವಿರುಕ್ತಿ**

"ದೂರ, ಸಾಮೀಪ್ಯ, ಸಂಭ್ರಮ, ಆತಿಥ್ಯ, ಆವೃತ್ತಿ, ವೀಪ್ಸೆ, ಬಾಧೆ, ಇವು ಮೊದಲಾದ ಅರ್ಥಗಳು ತೋರುವಲ್ಲಿ ಒಂದೇ ಪದವನ್ನು ಅನೇಕಾವೃತ್ತಿ ಪ್ರಯೋಗಿಸುತ್ತಾರೆ" ದ್ವಿರುಕ್ತಿಗಳನ್ನು ಹೇಳುವುದರಿಂದ ಕೇಳುಗರ ಮೇಲೆ ಹೆಚ್ಚಿನ ಪರಿಣಾಮವುಂಟಾಗುತ್ತದೆ. ಇಂತಹ ಪ್ರಯೋಗಗಳನ್ನು ಶ್ರೀಕಂಠೇಶಗೌಡರು ಬಳಸಿದ್ದಾರೆ. **ಉದಾಹರಣೆ**– ತೆಗೆತೆಗೆ(ಪುಟ–169), ತಿರತಿರಗಿ(180), ಬಾರೊಬಾರೊ(181), ಏಳಿಏಳಿ(181), ಸಹಿಸುಸಹಿಸು(184), ಸುದಿವಸಸುದಿವಸ(190), ಪಿಟಿಪಿಟಿ(190), ನೋಡಿ!ನೋಡಿ!(194), ಸತ್ತೆಸತ್ತೆ(202), ಅಮ್ಮಅಮ್ಮ(204), ತಳ್ಳುತಳ್ಳು(205),.

**(ಈ) ಜೋಡುನುಡಿ**

ಸಾಹಿತ್ಯದಲ್ಲಿ ಸಾಮಾನ್ಯವಾಗಿ ಜೋಡುನುಡಿಗಳು ಬಳಕೆಯಾಗುತ್ತವೆ. ಇವು ಕಾವ್ಯ ಭಾಗಕ್ಕೆ ಮಾತಿಗೆ ಮೆರುಗನ್ನು ತರುತ್ತವೆ. ಹಾಗು ಕನ್ನಡದ ಜಾಯಮಾನಕ್ಕೆ ಹೊಂದಿಕೊಂಡು ಬಂದ ನುಡಿಗಳೆನ್ನಬಹುದು. ಶ್ರೀಕಂಠೇಶಗೌಡರ ಈ ನಾಟಕದಲ್ಲಿನ ಕೆಲವು ಜೋಡುನುಡಿಗಳನ್ನು ಪಟ್ಟಿಮಾಡಬಹುದು. ಇವುಗಳ ಬಳಕೆಯ ನಾಟಕ ಕಳೆಕಟ್ಟುವಲ್ಲಿ ಸಹಾಯವಾಗಿದೆ. ಉದಾಹರಣೆ–ಕಾರುಬಾರು(ಪುಟ–156), ಸುಟ್ಟುಗಿಟ್ಟು(159), ಮಾನಮರ್ಯಾದೆ(167), ಆಡಿಪಾಡಿ(177), ಸುದ್ದೀಗಿದ್ದಿ(181), ಗಪ್‌ಚಿಪ್(190), ಆಟಪಾಟ(192).

**(ಉ) ಅನ್ಯಭಾಷಾ ಪದಗಳು**

ಒಂದು ಭಾಷೆಯಲ್ಲಿ ಬೇರೊಂದು ಭಾಷೆಯ ಪದಗಳು ಸಹಜವಾಗಿಯೇ ಪ್ರಯೋಗಗೊಳ್ಳುತ್ತವೆ. ಒಂದು ಭಾಷೆಯ ಬೆಳವಣಿಗೆಗೆ ಇದು ಸಹಕಾರಿಯಾಗಬಲ್ಲದು, ಶ್ರೀಕಂಠೇಶಗೌಡರ ಈ ನಾಟಕದಲ್ಲು ಅಂತಹ ಪ್ರಯೋಗಗಳನ್ನು ಗುರುತಿಸಬಹುದು. **ಉದಾಹರಣೆ**– ಪಾರ್ಟು(136), ಡಜನ್(138), ವಾಜರ(138), ರಾಜಪಾರ್ಟ್(139), ದರ್ಜೆ(139), ಇನಾಮು(137).

## 2) ವಾಕ್ಯರಚನೆಯ ಶೈಲಿ

ಶ್ರೀಕಂಠೇಶಗೌಡರ ವಾಕ್ಯ ರಚನೆ ವಿಶಿಷ್ಟವಾದುದು. ಪ್ರತ್ಯಯ ಕನ್ನಡವಾಗಿ ಪದಗಳು ಸಂಸ್ಕೃತವಾಗಿರುವುದನ್ನು ಹಲವು ಕಡೆ ಬಳಸಿದ್ದಾರೆ. **ಉದಾಹರಣೆಗೆ**– ಕ್ಷತ್ರಿಯನಿಗೆ

ಸರ್ವೋತ್ಕೃಷ್ಟವಾದ ಪುರಾಣ ಪ್ರಸಿದ್ಧವಾದ ಗಾಂಧರ್ವ ವಿವಾಹವನ್ನೇಕೆ ತಿರಸ್ಕರಿಸುವೆ? (ಪುಟ–126) ಜನಪದ ಅನುಭವದ ನುಡಿಗಳಾದ ಗಾದೆ ಮಾತುಗಳು ಕೂಡ ಅಲ್ಲಲ್ಲಿ ಕಂಡುಬರುತ್ತವೆ. ಇವುಗಳ ಬಳಕೆ ನಾಟಕಕ್ಕೆ ಗ್ರಾಮೀಣ ಸೊಗಡನ್ನು ತುಂಬಿದೆ. ಹಳ್ಳಿಯ ಪರಿಸರದ ಹಿನ್ನೆಲೆಯಲ್ಲಿ ಬಂದ ನಾಟಕಕಾರನ ಈ ಪ್ರಯೋಗ ಔಚಿತ್ಯಪೂರ್ಣವಾಗಿದೆ. ಉದಾಹರಣೆಗೆ:– ಉಂಡಹೊಟ್ಟೆ ಮುಂದೆ ಮಡಗಿಕೊಂಡ್ಯಾಕೊ ದೂರುತ್ತೀಯೆ? ಮದ್ಲೆ ತಾಳ ಬಡಿದರೆ ಆನೆ ಬಂದಾವೆ (ಪುಟ–180) ಹಂದಿಯ ಬೇಟೆಗಿಂತಲೂ ಮುದ್ದಿಡುವುದು ಚಂದವಲ್ಲವೆ? (182) ಬೆಳೆಯತಕ್ಕ ಪದಾರ್ಥ ಬಲಿಯುವವರಿಗೂ ಕೆಲಸಕ್ಕೆ ಬಾರದು(191)

ಸರಳ ವಾಕ್ಯಗಳಲ್ಲಿ ವೈಶಿಷ್ಟ ಪೂರ್ಣವಾದ ಸಂಭಾಷಣೆಯನ್ನು ಕಾಣಬಹುದಾಗಿದೆ. ಉದಾಹರಣೆಗೆ:– ಮಾಯಾಚಾರಿ–ಈಕ್ಸಿಸಿ, ಮಾಚಯ್ಯ–ಈಕ್ಸಿಸಿ, ಮಾಯಾಚಾರಿ–ಈಕ್ಸಿಸಿ, ಕ್ಷಿಸಿ–ಕ್ಷಿಸಿ–ಕ್ಷಿಸಿ, ಮಾಚಯ್ಯ–ಕ್ಷಿಸಿ–ಕ್ಷಿಸಿ–ಕ್ಷಿಸಿ–ಸಿಕ್ಷಿಸಿ, ಮಾಯಾಚಾರಿ–ನಿನ್ನನ್ನು ಈಕ್ಸಿಸಿ, ಹಾಗೆಯೇ ಸಂಕೀರ್ಣ ವಾಕ್ಯಗಳನ್ನು ಬಳಸಿದ್ದಾರೆ. ಪದ್ಮಿನಿಯ ಮಾತಿನಲ್ಲಿ 22 ಸಾಲಿನ ಸಂಭಾಷಣೆ ಬಳಸಿದ್ದಾರೆ. ಅದು ಹೀಗಿದೆ. ಈ ಲೋಕದಲ್ಲಿ ಕೆಲವರಿಗಿಂತಲೂ– – – – – – – – – – – – – – – – – – – – -- – – – – – –ಮರ್ಯಾದೆ ಮೀರಿ ನಡೆಯುತ್ತಿರುವೆನು (ಪುಟ–136)

ಗ್ರಾಮೀಣ ಜನರ ಬದುಕಿನ ಸೊಗಸಾದ ಚಿತ್ರಣವನ್ನು ತಂದಿರುವುದು ಕಾಣುತ್ತದೆ. ಅದು ಹೀಗಿದೆ. ಮಾಚಯ್ಯ–ಒಂದು ಮುರುಕು ತಂಗಳು ಹಿಟ್ಟು ಮೇಲೊಂದು ಈರುಳ್ಳಿಯಾದರೆ ತೀರಿತು. ಅದರ ಜೊತೆಗೆ ಹಸರು ಮೆಣಸಿನಕಾಯಿ ಆದರೆ ಆನಂದ, ಒಂದು ಮೊಗೆ ಅಂಬಲಿಯೂ ಆದರೆ ಊಟ ನೆಗೆದಾಡಿ ಹೋಯಿತು. (ಪುಟ–177) ಅರೆಪಾವು ಚಿಕ್ಕುಳ್ಳಿಕಾಳಾದರೆ ಚಂದ. ಕುರುಂಕುರುಂಮನೆ. ಕುರುಕುತ್ತಿರಬಹುದು. (ಪುಟ–177) ಮತ್ತೊಂದು ಉದಾಹರಣೆ:– ಮಾದ–ಸಂಬಳ ಕೊಡತಾನೆ ಸಂಬ್ಳ, ನೀ ಸಂಬ್ಳ ಕೊಡ್ತಿ ಕಣೊ!, ಕಾಡು ಮೇಡು ತಿರತಿರಗಿ ಆನೇ ಕಾಲಿಗೆ ಸಿಕ್ಕೊರಿಗೆಲ್ಲಾ ಒಣರೊಟ್ಟಿ ಜೊತೆಗೊಂದು ಒಣ ಮೆಣಸಿನ ಕಾಯಿಗ್ಗತಿಲ್ಲ.– – – – – – – – – – – – – ಇದೇ ಅಲ್ಲವೇನ್ಲ ನೀ ಕೊಡೊ ಸಿಂಬ್ಲ. ಸಂಬ್ಳ ಕೊಡತಾನಂತೆ ಸಂಬ್ಳ. ಬೊ ಸಂಬ್ಳ ಹೋಗೋಗು, ನಿನ್ನ ಸಂಬ್ಳ ನೀನೇ ತಿನ್ನು. ಪ್ರಮೀಳೆ ಮತ್ತು ಅರ್ಜುನರ ಮದುವೆಯ ನಂತರ ನಾಟಕ ಪಟ್ಟಿಯನ್ನು ಸಾರಥಿ ಓದಿದಾಗ 'ದ್ರೌಪದಿಯ ವಸ್ತ್ರಾಪಹರಣ' ಪ್ರಸ್ತಾಪಿಸಿದಾಗ ಪ್ರಮೀಳೆಯು "ದ್ರೌಪದಿಯ ಪತಿಯ ಎದುರಿಗೆ ಪುನಃ ದ್ರೌಪದಿಯ ವಸ್ತ್ರಾಪಹರಣವಾದರೆ ನೋಡುವುದಕ್ಕೆ ನನ್ನ ರಮಣನಿಗೆ ಎರಡು ಕಣ್ಣು ಸಾಲದು" ಎಂದಿದ್ದಾಳೆ. ವಿಶಿಷ್ಟ ಅರ್ಥದ ವಾಕ್ಯವಿದು ಎಂಬುದನ್ನು ಗುರುತಿಸಬಹುದು.

### 3) ಪ್ರಮೀಳಾರ್ಜುನೀಯ ನಾಟಕದ ಛಂದಸ್ಸು

ಶ್ರೀಕಂಠೇಶಗೌಡರು ಷೇಕ್ಸ್‌ಪಿಯರ್‌ನ 'ಎ ಮಿಡ್‌ಸಮ್ಮರ್ ನೈಟ್ಸ್ ಡ್ರೀಮ್' ನಾಟಕವನ್ನು ರೂಪಾಂತರಿಸುವುದಕ್ಕೆ ಮೊದಲೆ 'ಮ್ಯಾಕ್ಬೆತ್'ನ್ನು ರೂಪಾಂತರಿಸಿದ್ದರು. ಅಲ್ಲಿ ಷೇಕ್ಸ್‌ಪಿಯರ್‌ನ ಬ್ಲಾಂಕ್‌ವರ್ಸ್‌ಗೆ ಸಂವಾದಿಯಾಗಿ ವೃತ್ತಗಳನ್ನು ಹಾಗೂ ಕಂದಪದ್ಯಗಳನ್ನು ಪ್ರಯೋಗಿಸಿದ್ದರು. ಇಲ್ಲೂ ಕೂಡ ಅದೇ ಪರಂಪರೆಯನ್ನು ಮುಂದುವರಿಸಿದರು. ಆದರೆ ಸೃಜನಶೀಲವಾಗಿ ಬಳಸಬಹುದಾದ ರಗಳೆಯನ್ನು ಈ ನಾಟಕದಲ್ಲಿ ಕೈಬಿಟ್ಟರು. ಆದರೆ ಕರ್ನಾಟಕ ವಿಷಯ ಜಾತಿ ಛಂದಸ್ಸುಗಳಲ್ಲಿ ಪ್ರಸಿದ್ಧವಾದ ಷಟ್ಪದಿಗಳಲ್ಲಿ ಒಂದಾದ ಶರಷಟ್ಪದಿಯನ್ನು ಉಳಿದ ನಾಟಕಗಳಲ್ಲಿ ಬಳಸಿದಂತೆ ಇಲ್ಲಿಯೂ ಬಳಸಿದರು.

**(ಅ) ಕನ್ನಡ ಮಾತ್ರಾ ಛಂದಸ್ಸಿನ ಬಳಕೆ.**

ಅಶುಗ ಮತ್ತು ಮನ್ಮಥನ ಸಂಭಾಷಣೆಯಲ್ಲಿ **3** ಶರಷಟ್ಪದಿಗಳನ್ನು ಬಳಸಿದ್ದಾರೆ. ಇಲ್ಲಿ ಇವರ ಷಟ್ಪದಿ ಬಗೆಗಿನ ಪ್ರೀತಿಯನ್ನು ಗುರುತಿಸಬಹುದು. ಲಯಬದ್ಧ ಶೈಲಿಯಲ್ಲಿ ಪ್ರಯೋಗವಾಗಿರುವುದು ಗಮನಾರ್ಹ.

**ಉದಾಹರಣೆ–** ವಂದಿತೆ ದೇವಾ ।
ಬಂದಳು ಪದ್ಮಿನಿ
ಕುಂದಿದ ಮುಖದಿಂ ನೋಡಿತ್ತಾ॥
ಸುಂದರಿ ದಯಾಮಾ ।
ಡೆಂದು ಜಯಂತನು।
ಚಂದದ ಪೊಗಳುವ ಬೇಡುತ್ತಾ॥ (ಪುಟ–164)

ಸಮಾಧಿ ಪರಿಣಯ ನಾಟಕದ ಆರಂಭದಲ್ಲಿ ಸೂತ್ರಧಾರನ ಮಾತುಗಳಲ್ಲಿ ಕನ್ನಡದ ಸೀಸಪದ್ಯ ಬಳಸಿರುವುದನ್ನು ಕಾಣಬಹುದು ಅದು ಹೀಗಿದೆ.

ವೃದ್ಧರಾದವರಿಂತು ಮದ್ದು ತಿಂದವರಂತೆ
– – – – – – – – – – –
ಸದ್ದು ಮಾಡದೆ ನೀವು ನೋಡಿ ನೋಡಿ (ಪುಟ–197)

**(ಆ) ಸಂಸ್ಕೃತ ವೃತ್ತಗಳು**

ಶ್ರೀಕಂಠೇಶಗೌಡರು ಸಂಸ್ಕೃತ ಪ್ರಭಾವಕ್ಕೆ ಒಳಗಾಗಿದ್ದಾರೆ ಎಂಬುದನ್ನು ಈಗಾಗಲೇ ನೋಡಿದ್ದೇವೆ. ನಾಂದಿ ಪದ್ಯಗಳಲ್ಲಿ ಇಷ್ಟದೈವವನ್ನು ಪ್ರಾರ್ಥಿಸುವ ಪರಿಪಾಠವಿದೆ. ಅದರಂತೆ. ಶಾರ್ದೂಲ ವಿಕ್ರೀಡಿತ ವೃತ್ತದ ಮೂಲಕ ನಾಟಕದ ಆರಂಭವಾಗಿದೆ. ಪ್ರತಾಪರುದ್ರ ದೇವದಲ್ಲಿ **209** ಕಂದಪದ್ಯಗಳನ್ನು ಬಳಸಿದ್ದ ಶ್ರೀಕಂಠೇಶಗೌಡರು ಇಲ್ಲಿ

ಕೇವಲ **27** ಕಂದ ಪದ್ಯಗಳನ್ನು ಬಳಸಿರುವುದು ಕಂಡು ಬರುತ್ತದೆ. ಇವುಗಳು ಹಲವು ವೈಶಿಷ್ಟಗಳಿಂದ ಕೂಡಿವೆ. ಕೆಳಗಿನ ಕಂದಪದ್ಯದಲ್ಲಿ ಆದಿಪ್ರಾಸದ ಜತೆಗೆ ಮಧ್ಯಪ್ರಾಸ ಅಂತ್ಯ ಪ್ರಾಸಗಳಿರುವುದನ್ನು ಕಾಣಬಹುದು. ಅಶ್ವಪ್ರಾಸದ ಈ ಕಂದವನ್ನು ಗಮನಿಸಬಹುದು.

ಬಿಟ್ಟೋಡುವೆ ನೀನಿವನಂ।
ನಿಟ್ಟೋಟದಿ ನಿನ್ನ ಬಟ್ಟೆಯಂ ಮೆಟ್ಟುತಿವಂ॥
ಅಟ್ಟಟ್ಟಾಡುವನಡಿಯಂ।
ಮುಟ್ಟುತೆ ಕೆಟ್ಟಾಟವಾಯ್ತು ನಿಟ್ಟಿಸೆನುತ್ತಂ॥(ಪುಟ–146)

ಇಲ್ಲಿ ಸಿಂಹಪ್ರಾಸದ ಬಳಕೆಯ ಕಂದಪದ್ಯವಿರುವುದನ್ನು ಕಾಣಬಹುದು.

ತದುವಂ ಕುಡುವಾ ಪಿತನಂ।
ಮನವಂ ಕುಡುವಾ ಪುರಾರಿವೊಲ್ ಜಾನಿಸುತಂ॥
ತನುವಂ ತಳೆದವರವನೋಳ್।
ತನುವಿರುವರೆಗಂ ಧರೆಯಲಿ ಸೇವಿಸುತಿರ್ಕ್ಕು೦॥(ಪುಟ.130)

ಕಂದ ಪದ್ಯಗಳನ್ನು ಬಿಟ್ಟರೆ ವೃತ್ತಗಳ ಪ್ರಯೋಗಗಳಿವೆ. ವೃತ್ತಗಳಲ್ಲು ಹೆಚ್ಚಾಗಿ ಆದಿಪ್ರಾಸಗಳನ್ನು ಬಳಸಿದ್ದಾರೆ. ನಾಟಕದ ಆರಂಭದಲ್ಲೆ ಖ್ಯಾತ ಕರ್ನಾಟಕಗಳಲ್ಲಿ ಒಂದಾದ ಶಾರ್ದೂಲ ವಿಕ್ರೀಡಿತ ವೃತ್ತವನ್ನು ರಚಿಸಿದ್ದಾರೆ. ಆದರೆ ನಾಟಕದಲ್ಲಿ ಹೆಚ್ಚಾಗಿ ಉತ್ಪಲಮಾಲಾ ವೃತ್ತಗಳನ್ನು ಬಳಸಿರುವುದನ್ನು ಕಾಣುತ್ತೇವೆ. ಒಟ್ಟು **10** ವೃತ್ತಗಳನ್ನು ರಚಿಸಿದ್ದಾರೆ. ಅದರಲ್ಲಿ ಒಂದು ಮತ್ತೇಭವಿಕ್ರೀಡಿತ ವೃತ್ತವಿರುವುದನ್ನು ನೋಡಬಹುದು.

ತರವೋಳ್ಪುಟ್ಟಿದ ಮೊಗ್ಗೆ ಪೂವುಮಿಡಿಪಣ್ಬೀಜಂಗಳಾಗುತ್ತಂ ತಾಂ
ತರು ಮತ್ತಾಗುವ ಧಾತ್ರಿಯೋಳ್ಪರರಿಗಿತ್ತಾನಂದವಂನ್ನನ್ನವಂ
ಹರನಂ ಮೆಚ್ಚಿಪ ಮಾಳ್ಕೆಯಿಂದಿರುವೆಯೋ ಸಂಸಾರದಲ್ಲಲ್ಲದಾ
ಸುರರಂ ಪೂಜಿಸೆ ಕಿತ್ತ ಪತ್ರಕುಸುಮಂಗಳ್ ಬಾಡುವಂತಿರ್ಪೆಯೋ.(ಪುಟ.131)

**(ಇ) ಗೇಯ ಗೀತಗಳು**

ರಂಗ ಸ್ಥಳಗಳಲ್ಲಿ ನಟರಿಗೆ ಅಭಿನಯ ಕೌಶಲ್ಯದ ಜೊತೆಗೆ, ಸಂಗೀತ ಪ್ರತಿಭೆ ಹೊರಹೊಮ್ಮುವುದು ಅರ್ಥಪೂರ್ಣ. ಹೀಗೆ ಪ್ರೇಕ್ಷಕರು ಮೆಲುಕು ಹಾಕುವ ಗೇಯತೆ ಒಳಗೊಂಡ ರಚನೆಗಳನ್ನು ನಾವು ನೋಡಬಹುದು–

ಕಂಡೆನು ಕಂಡೆನಹಹಹಾ। ಇವನ ಕಣ್ಣಿಗೆ।
ಮೆಡ್ಡಗಣ್ಣಿಗೆ। ಹಿಂಡುವೆನಿದನಹಹಾ॥
– – – – – – – – –
ಮತ್ತುಗಣ್ಣಿಗೆ। ಹಿಂಡಿದೆನಿದನಹಹಾ॥

ತೆಲುಗಿನ ಪ್ರಸಿದ್ಧ ಧಾಟಿಗಳಾದ, ರಾರಾಸಮ್ಮಿ ಸಾರಾನಜ್ಜೆ, ಏಮಿಸೇತು ಎಟುಲಸ್ಸೆತು, ಸೈಯ್ಯಾಲಟಕು, ಪೋಪಮ್ಮದೆ ಪೊಮ್ಮನೆ, ಮೊದಲಾದ ಧಾಟಿಗಳನ್ನು ಬಳಸಿದ್ದಾರೆ. ಹಿಂದುಸ್ಥಾನಿ ಧಾಟಿಯ ಹಾಡುಗಳನ್ನು ಹಾಗು 'ಸಾರವಾಗಿರ್ಪ ರತ್ನಂಗಳನ್ನು' ಎಂಬ ಕನ್ನಡ ಧಾಟಿಯೊಂದನ್ನು ಕಾಣಬಹುದು. ಇವುಗಳನ್ನು ಆದಿತಾಳ, ಝಂಪೆತಾಳ, ರೂಪಕತಾಳ, ಏಕತಾಳ, ತ್ರಿಪುಟತಾಳ ಮಿಶ್ರಚಾಪುತಾಳ, ಮೊದಲಾದವುಗಳಲ್ಲಿ **38** ಹಾಡುಗಳನ್ನು ರಚಿಸಿದ್ದಾರೆ. ಜುಂಜೋಟಿ, ಕಾಪಿ, ಕಮಾಚು, ಪೀಲು, ಪೂರ್ವಿ ಕಲ್ಯಾಣಿ, ತೋಡಿ, ಶಂಕರಾಭರಣ ನೋಟು, ಬೇಹಾಗ್, ಖರಹರಪ್ರಿಯಾ, ನಾದನಾಮಕ್ರಿಯೆ, ಕೇದಾರ, ಯಮುನಾ ಕಲ್ಯಾಣಿ, ಸುರುಟಿ, ಪೂರ್ವಿ, ಜಲಾಬ್. ಮೊದಲಾದ ರಾಗಗಳಲ್ಲಿ ರಚಿಸದ್ದಾರೆ.

ಹಾಡುಗಳ ಮೂಲಕ ಸಂಭಾಷಣೆಯನ್ನು ಬಳಸಿದ್ದಾರೆ. ಪದ್ಯ ಸಂವಾದಗಳು ಕಂಪನಿ ನಾಟಕದ ವೈಶಿಷ್ಟಗಳಲ್ಲಿ ಒಂದು. ನಟರೆಲ್ಲರೂ ಗಾಯಕರೇ ಆದಾಗ ಪದ್ಯ ಸಂವಾದವು ಶಕ್ಯವಾಗುತ್ತದೆ. ಆ ಕಾಲದಲ್ಲಿ ಹಾಡಲು ಬಾರದವರು ನಟರಾಗಲು ಸಾಧ್ಯವಿರಲಿಲ್ಲ. ಆದ್ದರಿಂದ ಪದ್ಯ ಸಂವಾದಗಳು ಕಂಪನಿ ನಾಟಕಗಳಲ್ಲಿ ಹೆಚ್ಚಾಗಿ ಕಾಣುತ್ತಿದ್ದವು. ಶ್ರೀಕಂಠೇಶಗೌಡರ ನಾಟಕಗಳಲ್ಲಿ ಏಕವ್ಯಕ್ತಿ ಗಾಯನದ ಜೊತೆಗೆ ಸಂವಾದದ ಗೀತೆಗಳನ್ನು ಕಾಣುತ್ತೇವೆ.

**ಉದಾಹರಣೆ**– ರಾಗ–ಸುರಟಿ ರೂಪಕತಾಳ

ಜಯಂತ–ನಾಗವೇಣಿಯ ಪೋಗಬೇಡವೆ। ರಾಗ ತೋರಿಸು ನನ್ನೊಳು॥
ವಸಂತ–ನಾಗವೇಣಿಯು ನಿನ್ನನೊಲ್ಲಳು। ರಾಗಗೊಂಡಿರೆ ನನ್ನೊಳು॥
ಜಯಂತ–ಗಾಡಿಕಾರ್ತಿಯೆ ಬೇಡಿಕೊಂಬೆನೆ। ನೀನು ದಯವನು ಬೇಗನೆ।
ವಸಂತ–ಹೇಡಿಯಿವನನು ನೋಡಬೇಡವೆ। ಕೂಡು ನನ್ನನು ಬೇಡುವೆ॥
ಜಯಂತ–ಪಲ್ಲವಾಧರೆನಿಲ್ಲದೀತನು। ಸಲ್ಲಿಸೆನ್ನೊಳು ದಯವನು।

ಈ ರೀತಿಯ ಪ್ರಯೋಗಗಳಿಂದಾಗಿ ನಾಟಕದ ಸೊಗಸು ಮತ್ತಷ್ಟು ಹೆಚ್ಚಿದೆ. ಬಹುತೇಕ ಹಾಡುಗಳು ಏಕತಾಳಗಳಿಂದ ಕೂಡಿವೆ. ಇವಲ್ಲದೇ **2** ಜನಪದ ಪದ್ಯಗಳನ್ನು ರಚಿಸಿದ್ದಾರೆ.

**ಉದಾಹರಣೆ**– ಆಹಾಹೇಣ್ಣೇ ಆಹಾ ಹೆಣ್ಣೇ
ಗಜಲಿಂಬೆ ಹೆಣ್ಣೆ ಮುಚ್ಚಿದ ಕಣ್ಣಿಗೆ
– – – – – – – – –
ಏಳೆನ್ನ ಚೆಣ್ಣೇ ಗತಿಯನಗೆ ಮಣ್ಣೆ
ಆಹಾ ಹೆಣ್ಣೇ ಆಹಾ ಹೆಣ್ಣೇ (ಪುಟ–202)

ಹೀಗೆ ಮೇಲಿನ ಗೇಯ ಗೀತಗಳಲ್ಲಿ ಶ್ರೀಕಂಠೇಶಗೌಡರ ಅನನ್ಯ ಪ್ರತಿಭೆಯು ಅನಾವರಣಗೊಂಡಿದೆ.

---

# ಅಧ್ಯಾಯ–7

# ಶ್ರೀಕಂಠೇಶಗೌಡರ 'ಸೀತಾಸ್ವಯಂವರ' ನಾಟಕ ಅವಲೋಕನ

## I. 'ಸೀತಾಸ್ವಯಂವರ' ನಾಟಕದ ಕಥಾವಸ್ತು

### 1ನೇ ಅಂಕ

ಪ್ರಾರಂಭದಲ್ಲಿ ಸೂತ್ರಧಾರ ನಟಿಯರು ಪ್ರವೇಶಿಸಿ ನಾಟಕದ ವಸ್ತು – ಸಂವಿಧಾನವನ್ನು ಪ್ರೇಕ್ಷಕರಿಗೆ ಪರಿಚಯಿಸುತ್ತಾರೆ. ರಾವಣನು, ಸಾರಣನಿಗೆ ಜನಕರಾಜನ ಬಳಿಗೆ ಕನ್ಯಾರ್ಥಿಯಾಗಿ ಹೋಗಿಬರುವಂತೆ ತಿಳಿಸಿದ್ದಾನೆ. ಸಾರಣನು ತನ್ನ ಗೆಳೆಯ ಶುಕನನ್ನು ಭೇಟಿಯಾಗಿ ಜಾನಕಿಯ ಸೌಂದರ್ಯಕ್ಕೆ ಮಾರುಹೋಗಿರುವ ರಾವಣನ ವಿಚಾರ ತಿಳಿಸುತ್ತಾನೆ. ಜನಕರಾಯನು ತನ್ನ ಮಗಳನ್ನು ರಾವಣನಿಗೆ ಕೊಡುವುದಿಲ್ಲವೆಂಬುದು ಶುಕನ ಅಭಿಪ್ರಾಯ. ಏಕೆಂದರೆ ಆಕೆಗೆ ರಾಮನಲ್ಲಿ ಅನುರಾಗವಿದೆ. ಆದರೆ ನಾನು ಕನ್ಯಾರ್ಥಿಯಾಗಿ ಹೋದ ಮೇಲೆ ಏನಾಗುವುದು ನೋಡೆಂದು ಸಾರಣ ತಿಳಿಸುತ್ತಾನೆ. ರಾವಣನಿಗೆ ಸೀತೆಯನ್ನು ಕೊಡುವುದಕ್ಕೆ ಇಷ್ಟವಿಲ್ಲದಿರುವುದರಿಂದ ಸೀತಾ ಸ್ವಯಂವರ. ತನ್ನ ಮನಸ್ಸಿಗೆ ಒಪ್ಪುವ ವರನನ್ನು ವರಿಸುವ ಅವಕಾಶ ಸೀತೆಗಿದೆ. ಸೀತೆ ತನ್ನ ಇಚ್ಛಾನುಸಾರ ರಾವಣನನ್ನು ವರಿಸಿದರೂ ಸೀತಾಸ್ವಯಂವರವಾಗುತ್ತದೆ. ವಿಶ್ವಾಮಿತ್ರನು ತನ್ನ ಯಜ್ಞವನ್ನು ಕಾಪಾಡುವುದಕ್ಕಾಗಿ ರಾಮನನ್ನು ಕರೆದುಕೊಂಡು ಬರುವೆನೆಂದು ಸುದ್ದಿ ಹಬ್ಬಿಸಿ ಅಯೋಧ್ಯೆಗೆ ಹೋಗಿದ್ದಾನೆ. ಜನಕರಾಯನಿಗೆ ತಾನು ವಿಶ್ವಾಮಿತ್ರನ ಯಾಗವನ್ನು ನೋಡುವುದಕ್ಕೆ ತೆರಳುತ್ತೇನೆಂದು ಹೇಳಿ, ರಹಸ್ಯವಾಗಿ ಸೀತಾರಾಮರಿಗೆ ಪಾಣಿಗ್ರಹಣ ಮಾಡಿಸುವ ಉದ್ದೇಶವಿದೆ. ರಾಮನು ಅಲ್ಲಿಗೆ ಬರುವುದಕ್ಕೆ ಮುಂಚೆಯೇ ರಾವಣನು ರಾಮನ ರೂಪದಲ್ಲಿ ಹೋದರೆ ಕಾರ್ಯ ಕೈಗೂಡುತ್ತದೆ. ಎಂಬುದು ಸಾರಣನ ಆಲೋಚನೆ.

ಶುಕನು, ವಿಶ್ವಾಮಿತ್ರ ಮತ್ತು ರಾಮಲಕ್ಷ್ಮಣರನ್ನು ಮಾರ್ಗಮಧ್ಯ ಕೊಲ್ಲುವುದು ಉತ್ತಮ ಎಂದು ಸಲಹೆ ನೀಡುತ್ತಾನೆ. ಈ ಕಾರ್ಯಕ್ಕೆ ತಾಟಕಿಯೇ ಸರಿ ಎಂದು ಆಲೋಚಿಸಿ, ಸಾರಣನು ಅವಳನ್ನು ಸಿದ್ಧಪಡಿಸುತ್ತಾನೆ. ಪರಶುರಾಮನು ಯಜ್ಞಭಂಗ ಮಾಡದಂತೆ ರಾವಣನನ್ನು ಕೇಳಿಕೊಂಡಿದ್ದಾನೆ. ರಾವಣ ಮತ್ತು ಪರಶುರಾಮರಿಬ್ಬರೂ ಪರಮೇಶ್ವರನ ಭಕ್ತರಾದುದರಿಂದ ರಾವಣನಿಗೆ ಅವನಲ್ಲಿ ಗೌರವವಿದೆ. ಈ ಘಟನೆಯ ಹಿಂದೆ ವಿಶ್ವಾಮಿತ್ರನ ತಂತ್ರವಿದೆಯೆಂದು ಸಾರಣ ತಿಳಿಯುತ್ತಾನೆ. ಸಾರಣನು ರಾಮವೇಷವನ್ನು ಧರಿಸಿಕೊಂಡು ಬರುತ್ತಿರುವ ರಾವಣನನ್ನು ನೋಡಿ, ಸಂತೋಷಪಡುತ್ತಾನೆ. ಆದರೆ ನರಪಶುವಿನ ಆಕಾರದಿಂದ ಕನ್ಯಾದಾನಕ್ಕೆ ಕೈಯೊಡ್ಡುವುದು ನನಗೆ

ನಾಚಿಕೆಯಾಗುತ್ತದೆಂದು ರಾವಣ ತಿಳಿಸುತ್ತಾನೆ. ಸಾರಣನು ದಮಯಂತೀ ಸ್ವಯಂವರದಲ್ಲಿ ದಿಕ್ಪಾಲಕರೂ ವೇಷಧಾರಿಗಳಾಗಿದ್ದನ್ನು ನೆನಪಿಸುತ್ತಾನೆ. ಶುಕನು ಪುಷ್ಪಕ ವಿಮಾನವು ಸಿದ್ಧವಾಗಿರುವುದನ್ನು ತಿಳಿಸಿದಾಗ, ರಾವಣನು ಸಾರಣ ಶುಕರೊಡನೆ ಜಾನಕಿಯ ಕೌಶಿಕಾಶ್ರಮಕ್ಕೆ ಹೊರಡುತ್ತಾನೆ.

## 2ನೇ ಅಂಕ

ಕೌಶಿಕಾಶ್ರಮದ ಬಳಿ ರಾವಣ ನಾವೇನು ಮಾಡಬೇಕೆಂದು ಯೋಚಿಸಿದಾಗ, ಸಾರಣ ನಾವು ಭೂ ಪ್ರದೇಶದಲ್ಲಿ ಸಂಚಾರ ಮಾಡುವುದಕ್ಕೆ ನಾವು ತಿರಸ್ಕರಿಣೀವಿದ್ಯೆಯನ್ನು ಅನುಸರಿಸಬೇಕೆನ್ನುತ್ತಾನೆ. ಅಗೋಚರವಾಗಿದ್ದುಕೊಂಡು ಇಲ್ಲಿ ನಡೆಯುವುದೆಲ್ಲವನ್ನು ತಿಳಿದು ಕೊಳ್ಳಬಹುದೆಂದು ರಾವಣನು ಸಂತೋಷಪಡುತ್ತಾನೆ. ಶುಕನು ತಿರಸ್ಕರಣೀವಿದ್ಯೆಯನ್ನು ಜಪಿಸುತ್ತಾನೆ. ಅಷ್ಟರಲ್ಲಿ ವಿಶ್ವಾಮಿತ್ರರ ಯಜ್ಞವು ಪೂರೈಸುವವರೆಗೂ ಜನಕರಾಜನು ಕೌಶಿಕಾಶ್ರಮದಲ್ಲಿಯೇ ಇರುವನೆಂದು ಸತ್ಯವ್ರತನು ದೇವವ್ರತನಿಗೆ ತಿಳಿಸುತ್ತಾನೆ. ರಾವಣ ಮತ್ತು ಸಾರಣ, ಶುಕರು ತಿರಸ್ಕರಣೀವಿದ್ಯೆಯಿಂದಾಗಿ ಅಗೋಚರವಾಗಿರುವುದರ ಜೊತೆಗೆ ಇವರ ಮಾತುಗಳು ವಿಶ್ವಾಮಿತ್ರರ ಶಿಷ್ಯರಿಗೆ ಕೇಳಿಸುವುದಿಲ್ಲ. ಪುರೋಹಿತರಾದ ಶತಾನಂದರು ರಾಮನ ಗುಣವನ್ನು ಜನಕನ ಬಳಿ ಪ್ರತಿ ನಿಮಿಷವೂ ಹೊಗಳುತ್ತಿದ್ದಾರೆ. ಶತಾನಂದರ ಮಾತುಗಳನ್ನು ಕೇಳಿ ಜನಕನಿಗೆ ರಾಮನಲ್ಲಿ ಪ್ರೀತಿಯುಂಟಾಗಿದೆ. ನಂತರ ಕೌಶಿಕೀ ತೀರದಲ್ಲಿ ಅಲಂಕೃತವಾದ ಮಾವಿನ ತೋಪಿನಲ್ಲಿ ನಾವು ವಿಹರಿಸುತ್ತ ಅಲ್ಲಿನ ವರ್ತಮಾನವನ್ನು ತಿಳಿಯೋಣವೆಂದು ರಾವಣನು ಮತ್ತು ಅವನ ಮಂತ್ರಿಗಳು ಹೊರಡುತ್ತಾರೆ.

ರಾವಣನು ಸೀತೆಯನ್ನು ನೋಡುವ ಆಸೆಯನ್ನು ವ್ಯಕ್ತಪಡಿಸುತ್ತಾನೆ. ಸಾರಣ ಮತ್ತು ಶುಕರು ಕಿಂಶುಕಾರಣ್ಯದ ದಕ್ಷಿಣದಿಕ್ಕಿನ ಮಾರ್ಗದಲ್ಲಿ ಕರೆದೊಯ್ಯುತ್ತಾರೆ. ಸುಚರಿತೆ ಮತ್ತು ಸೀತೆ ಮಾತನಾಡುತ್ತಿದ್ದಾರೆ. ಆದರೆ ರಾವಣನಿಗೆ ಸಖಿ ಸುಚರಿತೆ ಮಾತ್ರ ಕಾಣಿಸುತ್ತಾಳೆ. ತನ್ನ ಕನಸಿನಲ್ಲಿ ಕಂಡ ವ್ಯಕ್ತಿಯನ್ನು ಬರೆಯಬೇಕೆಂಬ ಆಸೆ ಯಿಂದ ಸೀತೆ ಚಿತ್ರದ ಹಲಗೆ ಮತ್ತು ಬರೆಯುವ ಸಾಮಗ್ರಿಗಳನ್ನು ತರುವಂತೆ ಸಖಿ ಶೀಲವತಿಗೆ ತಿಳಿಸಿದ್ದಾಳೆ, ಶೀಲವತಿ ತರುತ್ತಾಳೆ. ಸೀತೆ ಈಗ ನನಗೆ ಚೈತನ್ಯ ಕಡಿಮೆಯಾಗಿದೆ ನಾನು ಬರೆಯಲಾರೆನು ಎನ್ನುತ್ತಾಳೆ. ನಂತರ ಸಖಿಯರ ಪ್ರೋತ್ಸಾಹದಿಂದಾಗಿ ನಾಚಿಕೆಬಿಟ್ಟು ಬರೆಯುವ ಪ್ರಯತ್ನಪಡುತ್ತಿದ್ದಾಳೆ. ರಾವಣನಿಗೆ ಚಿತ್ರ ಬರೆಯುತ್ತಿರುವ ಸೀತೆ ಕಾಣಿಸುತ್ತಿಲ್ಲ, ಆದರೆ ಬರೆಯುವ ಕ್ರಿಯೆಯಿಂದಾಗಿ ಬಳೆಗಳ ಶಬ್ದವು ಕೇಳಿಸುತ್ತಿದೆ. ಸೀತೆ ತಾನು ಬರೆದ ಚಿತ್ರವನ್ನು

ಸಖಿಯರಿಗೆ ತೋರಿಸುತ್ತಾಳೆ. ಶ್ಯಾಮವರ್ಣನಾದ ನಾಯಕನು ರಕ್ತನೇತ್ರಗಳು, ಅಜಾನುಬಾಹು, ಚೆನ್ನಿಗೆ ಬತ್ತಳಿಕೆ, ಚಿಗುರುಮೀಸೆಯ ಯುವಕನವನು. ರಾವಣ ಮರೆಯಿಂದ ಚಿತ್ರವನ್ನು ನೋಡಿ ನನ್ನನ್ನು ಬರೆಯದೆ ಯಾರನ್ನೋ ಬರೆದಿದ್ದಾಳೆಂದು ದುಃಖಿಸುತ್ತಾನೆ.

ಸೀತೆಯ ಕಲಾಪ್ರೌಢಿಮೆಯನ್ನು ಕಂಡು ಸಖಿಯರು ಅವಳನ್ನು ಮೆಚ್ಚಿಕೊಳ್ಳುತ್ತಾರೆ. ರೇಗಿಸುತ್ತಾರೆ. ಆ ಚಿತ್ರವನ್ನು ಒಬ್ಬ ಕ್ಷತ್ರಿಯ ಕುಮಾರನದೆಂದು ಸಾರಣ ತಿಳಿಯುತ್ತಾನೆ. ಕೈಯಲ್ಲಿ ವಿಶ್ವಾಮಿತ್ರ ಕೊಟ್ಟ ಕಡಗಗಳಿವೆ. ಇವುಗಳಲ್ಲಿ ರಾಕ್ಷಸಾಂಧೀಕರಣವೆಂಬ ಮಣಿಗಳು ಕೆತ್ತಿರುವುದರಿಂದ ಇವಳು ರಾಕ್ಷಸರ ಕಣ್ಣಿಗೆ ಕಾಣಿಸುವುದಿಲ್ಲವೆಂದು ಸಖಿಯರು ಮಾತನಾಡಿಕೊಳ್ಳುವುದನ್ನು ರಾವಣ ಮತ್ತು ಅವನ ಮಂತ್ರಿಗಳು ಕೇಳಿಸಿಕೊಳ್ಳುತ್ತಾರೆ. ಈ ಕಡಗಗಳನ್ನು ಕೊಟ್ಟ ವಿಶ್ವಾಮಿತ್ರನ ಬಗ್ಗೆ ಕೋಪಿಸಿಕೊಳ್ಳುತ್ತಾರೆ. ರಾವಣನಿಗೆ ಸೀತೆಯನ್ನು ನೋಡುವ ಬಯಕೆ ಹೆಚ್ಚಾಗಿದೆ. ಸಾರಣನು ಅಯೋಧ್ಯಾಪಟ್ಟಣದಿಂದ ಬಂದ ಬ್ರಾಹ್ಮಣನ ವೇಷಧಾರಿಯಾಗಿ ಆಯಾಸಗೊಂಡವನಂತೆ ನಟಿಸುತ್ತ ಸೀತೆಯ ಬಳಿಗೆ ಪ್ರವೇಶಿಸುತ್ತಾನೆ. ಸೀತೆಯು ಅವನನ್ನು ಉಪಚರಿಸುವಂತೆ ಸಖಿಯರಿಗೆ ತಿಳಿಸುತ್ತಾಳೆ. ಸಖಿಯರಿಗೆ ಈ ಬ್ರಾಹ್ಮಣನಲ್ಲಿ ಅನುಮಾನ ಹುಟ್ಟುತ್ತದೆ.

ವಿಶಿಷ್ಟ ಸಂಗತಿಯನ್ನು ವಿಶದವಾಗಿ ಹೇಳುವೆನು ಆದರೆ ನೀವು ರಾವಣ ಪಕ್ಷಪಾತಿಗಳಲ್ಲವಲ್ಲ ಎಂದು ಪ್ರಶ್ನಿಸುತ್ತಾನೆ. ಇದರಿಂದಾಗಿ ಈತ ತನ್ನ ಪ್ರಿಯರಾಮನ ಮಿತ್ರನೇ ಹೌದು ಎಂದು ಸೀತೆ ತಿಳಿಯುತ್ತಾಳೆ. ಸೀತೆಯು ರಾಮನ ವರ್ತಮಾನವನ್ನು ತಿಳಿಸುವಂತೆ ಕೋರುತ್ತಾಳೆ. ರಾವಣನಿಗೆ ಇದರಿಂದಾಗಿ ಬೇಸರವಾಗುತ್ತದೆ. ಈ ದಿವಸ ಇಲ್ಲಿಗೆ ರಘುಕುಮಾರನು ಬರುವನೆಂದು ಬ್ರಾಹ್ಮಣ ತಿಳಿಸುತ್ತಾನೆ. ಈ ಮಾತಿನಿಂದ ಸೀತೆ ಸಂತೋಷಗೊಂಡು ಕಡಗಗಳನ್ನು ಬ್ರಾಹ್ಮಣನಿಗೆ ನೀಡುತ್ತಾಳೆ. ಇದರಿಂದಾಗಿ ಸೀತೆಯನ್ನು ರಾವಣ ನೋಡುತ್ತಾನೆ. ಇವಳ ಪ್ರೀತಿಗೆ ಪಾತ್ರನಾಗಲು ನಾನು ಯಾವ ವೇಷವನ್ನಾದರೂ ತೊಡಲು ಸಿದ್ಧನೆಂದು ರಾವಣನು ನಿರ್ಧರಿಸುತ್ತಾನೆ.

## 3ನೇ ಅಂಕ

ರಾಕ್ಷಸಭಟರಾದ ಮಾರೀಚ, ಕರಾಳರು ಭೇಟಿಯಾಗುತ್ತಾರೆ. ಕರಾಳನು ನಮ್ಮ ತಾಟಕಿಯನ್ನು ಸುಬಾಹುವನ್ನು ರಾಮನು ಕೊಂದುಬಿಟ್ಟನೆಂದು ದುಃಖಿಸುತ್ತಾನೆ. ರಾಮನಿಗೆ ಮಾಯಾಸೀತೆಯನ್ನು ತೋರಿಸಿ ಬೆಂಕಿಯಲ್ಲಿ ಬಿದ್ದು ಸಾಯುವಂತೆ ಮಾಡುವ ಉಪಾಯ ರಾಕ್ಷಸರದು. ಆದರೆ ಈ ಕೃತ್ಯವನ್ನು ವಿಶ್ವಾಮಿತ್ರನಿಲ್ಲದಿದ್ದಾಗ ಮಾಡಬೇಕೆಂದು ನಿರ್ಧರಿಸುತ್ತಾರೆ. ಬೇಟೆಯ ವಿನೋದಕ್ಕಾಗಿ ಬಿಡಾರವನ್ನು ಬಿಟ್ಟುಬಂದ ರಾಮನನ್ನು ವಿಶ್ವಾಮಿತ್ರನ ಶಿಷ್ಯ

ಪಿಂಗಳನು ಹುಡುಕುತ್ತಿದ್ದಾನೆ. ಇವನು ರಾಮನ ಬಳಿಗೆ ಹೋಗುವುದಕ್ಕಿಂತ ಮುಂಚೆ ಕರಾಳನು ಪಿಂಗಳನ ರೂಪಿನಲ್ಲಿ ಹೋಗಿ ಆನೆಯ ಸೊಂಡಿಲಿಗೆ ಸಿಕ್ಕಿದವನಂತೆ ನಟಿಸುತ್ತ, ಪಿಂಗಳನ ಧ್ವನಿಯಲ್ಲಿ ಕರಾಳನು ರೋದಿಸುತ್ತಾನೆ. ರಾಮನು ಅವನನ್ನು ಬದುಕಿಸಲು ಬರುತ್ತಾನೆ. ಬಂದು ಸಿಂಹದ ಘರ್ಜನೆಯನ್ನು ಕೇಳಿದಾಗ ನಾನು ಮೂರ್ಛೆ ಹೋದೆ, ನೀನು ಬೇಟೆಯಾಡಿ ಬಳಲಿದ್ದೀಯ ವಿಶ್ರಮಿಸಿಕೊ ಎಂದು ರಾಮನಿಗೆ ಮಾಯಾಪಿಂಗಳ ಹೇಳುತ್ತಾನೆ.

ರಾಮನಿಗೆ ಮಾಯಾಪಿಂಗಳನು ಸೀತೆಯ ಪರಿಸ್ಥಿತಿಯನ್ನು ಪರಿಚಯಿಸುತ್ತಾನೆ. ಸೀತೆಯು ನಿನ್ನ ಚಿಂತೆಯಿಂದಲೇ ಕಣ್ಣೀರು ಸುರಿಸುತ್ತಾ ಕೆನ್ನೆಯಲ್ಲಿ ಕೈಯಿಟ್ಟುಕೊಂಡು ನಿದ್ರೆಯನ್ನು ತೊರೆದಿರುವಳು. ತನ್ನ ಮನಸ್ಸಿನಲ್ಲಿ ಕಲ್ಪಿಸಲ್ಪಟ್ಟ ನಿನ್ನ ಆಲಿಂಗನದಿಂದ ರಾತ್ರಿಯನ್ನು ಕಳೆಯುತ್ತಿದ್ದಾಳೆ ಎನ್ನುತ್ತಾನೆ. ರಾಮನಿಗೆ ಸೀತೆಯಲ್ಲಿ ಅನುರಾಗ ಹುಟ್ಟಿದೆ. ರಾಮನಿಗೆ ಮಾಯಾಪಿಂಗಳನು ಮಾಯಾಸಖಿಯರೊಡನೆ ಚಿಗುರಿನ ಹಾಸಿಗೆಯಲ್ಲಿ ಪವಡಿಸಿರುವ ಸೀತೆಯನ್ನು ತೋರಿಸುತ್ತಾನೆ. ಈ ಲತಾಂಗಿಯನ್ನು ನೋಡಿ ಋಷಿಕುಮಾರನಾದ ನನಗೆ ಹೇಗೋ ಅನ್ನಿಸುತ್ತದೆ. ರಾಜಕುಮಾರನಾದ ನೀನು ಹೇಗೆ ಸಹಿಸಿಕೊಳ್ಳುತ್ತೀಯೋ ಕಾಣೆ ಎಂದು ರಾಮನಿಗೆ ಹೇಳುತ್ತಾನೆ. ಸೀತೆ ರಘುಕುಮಾರನೆ ಬೇಗ ಬರಬಾರದೆ ನಾನು ಮನಸ್ಸು ಸೋತಿರುವನೆಂದು ರಾಮನನ್ನು ಬಯಸುತ್ತಾಳೆ. ರಾಮನು ಈಕೆಯಲ್ಲಿ ರೂಪಿಗೆ ಅನುಗುಣವಾದ ಮಾತೂ ಮಾತಿಗೆ ಅನುಗುಣವಾದ ರೂಪು ಇರುವವೆಂದು ಸಂತೋಷಪಡುತ್ತಾನೆ.

ರಾಮ ಮತ್ತು ಪಿಂಗಳರು ಬರುವವರೆಗೆ ವೃಕ್ಷದ ಮರೆಯಲ್ಲಿ ನಿಂತು ಈ ಕೌತುಕವನ್ನು ನೋಡಲು ಬಯಸುತ್ತಾರೆ. ನಿಜಪಿಂಗಳನು ರಾಮ, ಕಶ್ಯಪರನ್ನು ಹುಡುಕುತ್ತ ಬರುತ್ತಾನೆ. ಮೂವರು ಒಂದೆಡೆ ಸೇರುತ್ತಾರೆ. ನಿಜಪಿಂಗಳನು ಆ ವೃಕ್ಷದ ಮರೆಯಲ್ಲಿ ಜಾನಕಿಯಿರುವಂತಿದೆ, ವಿರಹತಪ್ತಳಾಗಿ ಸಖಿಯರಿಂದ ಶೈತ್ಯೋಪಚಾರ ಮಾಡಿಸಿಕೊಳ್ಳುತ್ತಿದ್ದಾಳೆ ಎಂದು ಪ್ರಶ್ನಿಸುತ್ತಾನೆ. ರಾಮನನ್ನು ಕುರಿತು ನೀನು ಮೋಸಹೋಗಬೇಡ, ಇವಳು ಸೀತೆಯಲ್ಲವೆನ್ನುತ್ತಾನೆ. ರಾಮನಿಗೆ ಆಶ್ಚರ್ಯವಾಗುತ್ತದೆ. ಮಾಯಾಕಶ್ಯಪನು ರಾಮನಿಗೆ, ಇವಳಿಗೆ ನಿನ್ನಿಂದ ಮದನಜ್ವರವುಂಟಾಗಿರುವುದು. ಇನ್ನು ನೀನು ಇವಳ ಮನೋರಥವನ್ನು ನೆರವೇರಿಸಬೇಕುಎನ್ನುತ್ತಾನೆ. ರಾಮನು ಇಡೀ ಜಗತ್ತೆ ರಾವಣನು ಸೀತೆಯನ್ನು ಬಯಸಿದ್ದಾನೆಂದು ತಿಳಿದಿದೆ. ನಿನಗೆ ಅರಿವಾಗಿಲ್ಲವೆ ಎನ್ನುತ್ತಾನೆ.

ಸೀತೆಯ ಮಾತಿನಿಂದ ರಾಮನಿಗೆ ಅವಳು ತನ್ನನ್ನೆ ಅನುಸರಿಸುತ್ತಿದ್ದಾಳೆಂದು ಸಂತೋಷಪಡುತ್ತಾನೆ. ಮಾಯಾಕಶ್ಯಪನು ನೀನೇ ಪುಣ್ಯವಂತ, ವರಿಸಿದರೆ ಇಂಥವಳನ್ನೇ

ವರಿಸಬೇಕು ಎಂದು ಮತ್ತಷ್ಟು ಆಸೆಪಟ್ಟಿಸುತ್ತಾನೆ. ರಾಮನು ಮಾಯಾಸೀತೆಯ ಬಲೆಗೆ ಬಿದ್ದಿರುವ ವಿಚಾರವನ್ನು ಮಾಯಾಪಿಂಗಳ ತಿಳಿಸಿದಾಗ, ಇವನು ಯಾರೋ ರಾಕ್ಷಸ ಪಿಂಗಳನ ರೂಪನಲ್ಲಿದ್ದಾನೆಂದು ನಿಜಕಶ್ಯಪ ಭಯಪಡುತ್ತಾನೆ. ರಾಮನು ಇಬ್ಬರು ಪಿಂಗಳರೂ, ಇಬ್ಬರು ಕಶ್ಯಪರನ್ನು ಕಂಡು, ಇವರಲ್ಲಿ ಇಬ್ಬರು ಸ್ನೇಹಿತರು, ಇಬ್ಬರುರಾಕ್ಷಸರು ಆದರೆ ರಾಕ್ಷಸರ ಮೇಲೆ ದಯೆ ತೋರುವುದೆಂದು ತಿಳಿಸುತ್ತಾನೆ. ರಾಮನು ಸೀತೆಯ ಬಳಿಗೆ ಹೋಗಿ ನೀನು ಹೆದರಬೇಡ, ರಾವಣನು ನಿನ್ನನ್ನು ಅಪಹರಿಸಿಕೊಂಡು ಹೋಗಲಾರನೆಂದು ಸಮಾಧಾನಪಡಿಸುತ್ತಾನೆ. ನಿಜಕಶ್ಯಪನು ಅವಳೆ ಸೀತೆಯಲ್ಲ, ಆಲೋಚನೆ ಮಾಡಿ ನೋಡೆಂದು ಮತ್ತೆ ರಾಮನಿಗೆ ತಿಳಿಹೇಳುತ್ತಾನೆ. ಈ ಮಾಯಾಸೀತೆಯು ಮಾಯೆಯ ಬೆಂಕಿಯಲ್ಲಿ ಬೀಳುತ್ತಾಳೆ. ಸಖಿಯರು ಆತಂಕಗೊಳ್ಳುತ್ತಾರೆ. ರಾಮನು ಜಾನಕಿಯು ನನ್ನೆದುರಿಗೆ ಬೆಂಕಿಯಲ್ಲಿ ಬಿದ್ದು ಪ್ರಾಣ ತ್ಯಾಗ ಮಾಡಿದಳೆ ಎಂದು ದುಃಖಿಸುತ್ತಾನೆ.

ರಾಮನು ನನ್ನ ಜಾನಕಿಯ ಹತ್ತಿದ ಬಂಡೆಯನ್ನೇ ನಾನು ಹತ್ತಿ ಅವಳು ಬಿದ್ದ ಬೆಂಕಿಯಲ್ಲೇ ನಾನು ಬೀಳುವೆನೆನ್ನುತ್ತಾನೆ. ರಾಮನನ್ನು ಬೆಂಕಿಯಲ್ಲಿ ಬೀಳಬೇಡವೆಂದು ನಿಜಪಿಂಗಳ ಬೇಡಿಕೊಳ್ಳುತ್ತಾನೆ. ರಾಮನು, ತನ್ನ ಕಣ್ಣಿದುರಿಗೆ ಸೀತೆಯು ಅಗ್ನಿಯ ಪಾಲಾದಳಲ್ಲ ಎಂದು ಬಂಡೆಯ ಮೇಲೆ ಕಾಲಿಡುತ್ತಾನೆ. ಆ ಬಂಡೆಯು ಅಹಲ್ಯೆಯಾಗಿ ಪರಿವರ್ತನೆಯಾಗುತ್ತದೆ. ಅಹಲ್ಯೆಗೆ ರಾಮ ವಂದಿಸುತ್ತಾನೆ. ಅಹಲ್ಯೆಯು ರಾಮನಿಗೆ ಹಾರೈಸುತ್ತಾಳೆ. ರಾಮನಿಗೆ ವಿಶ್ವಾಮಿತ್ರರ ಶಿಷ್ಯರಾದ ನಿಜಕಶ್ಯಪ ಪಿಂಗಳರನ್ನು ಅಹಲ್ಯೆ ಪರಿಚಯಿಸುತ್ತಾಳೆ. ರಾಕ್ಷಸರು ಪ್ರಾಣಿಗಳಾಗಿ ಓಡುತ್ತಿರುವುದನ್ನು ಅಹಲ್ಯೆ ರಾಮನಿಗೆ ತೋರಿಸುತ್ತಾಳೆ. ನಂತರ ರಾಮಬಾಣಕ್ಕೆ ಸಿಲುಕಿ ಮಾರೀಚ ಕರಾಳರು ಪ್ರಾಣಬಿಡುತ್ತಾರೆ. ಅಹಲ್ಯೆಯು ಮೊದಲಿನಂತೆ ಗೌತಮ ಮುನಿಯ ಸೇವೆಗೆ ಹೋಗಲು ಬಯಸಿ. ರಾಮನಿಂದ ಅನುಮತಿ ಪಡೆಯುತ್ತಾಳೆ. ರಾಮನಿಗೆ ಜಾನಕಿಯನ್ನು ಪಾಣಿಗ್ರಹಣ ಮಾಡಿಕೊಡು ದಾನವ ಕುಲವನ್ನು ರಕ್ಷಿಸುವಂತೆ ವಿನಂತಿಸುತ್ತಾಳೆ. ಮೂವರು ಆಶ್ರಮದ ಕಡೆ ಹೊರಡುತ್ತಾರೆ.

## 4ನೇ ಅಂಕ

ವಿಶ್ವಾಮಿತ್ರರ ಆಶ್ರಮದಲ್ಲಿ ಜನಕರಾಯನು ಶತಾನಂದರ ಬಳಿ ಅಯೋಧ್ಯೆಗೆ ಹೋದ ವಿಶ್ವಾಮಿತ್ರರನ್ನು ಬರಲಿಲ್ಲವಲ್ಲವೆಂದು ಆತಂಕಪಡುತ್ತಾನೆ. ಶತಾನಂದರು ವಿಶ್ವಾಮಿತ್ರರು ಇಂದಲ್ಲ ನಾಳೆ ಬರಬಹುದು ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾನೆ. ರಾವಣ ರಾಮನ ವೇಷದೊಂದಿಗೆ, ಸಾರಣ ಮತ್ತು ಶುಕರು ಲಕ್ಷ್ಮಣ, ವಿಶ್ವಾಮಿತ್ರರ

ವೇಷದೊಂದಿಗೆ ಆಶ್ರಮ ಪ್ರವೇಶಿಸುತ್ತಾರೆ. ಶುಕವಿಶ್ವಾಮಿತ್ರನು ಜನಕ ಮಹಾರಾಜನಿಗೆ ವಂದಿಸುತ್ತಾನೆ. ಶತಾನಂದರು ಇವರಿಬ್ಬರಲ್ಲಿ ರಾಮನಾರೆಂದು ಪ್ರಶ್ನಿಸುತ್ತಾರೆ. ನೀಲಮೇಘಶ್ಯಾಮವರ್ಣನಾದವನೇ ರಾಮ, ವಿನಯಭಾವದಿಂದ ನಿಂತಿರುವನೆ ಲಕ್ಷ್ಮಣನೆಂದು ತಿಳಿಸುತ್ತಾನೆ. ಈ ರಘುಕುಮಾರನಿಗೆ ನಮ್ಮ ಜಾನಕಿಯ ಜೊತೆಯಲ್ಲಿ ವಿವಾಹ ಸಂಘಟನೆಯಾದರೆ ನಮ್ಮ ಕುಲವೇ ನಿತ್ಯೋತ್ಸವವಾಗುವುದೆಂದು ಜನಕ ಹೇಳುತ್ತಾನೆ. ಅಷ್ಟರಲ್ಲಿ ಮತ್ತೊಬ್ಬ ಸೇವಕನು ಬಂದು ವಿಶ್ವಾಮಿತ್ರರು ರಾಮಲಕ್ಷ್ಮಣರೊಡನೆ ಬಂದಿರುವರೆಂದು ತಿಳಿಸುತ್ತಾನೆ. ಜನಕನು ಅವರೆಲ್ಲರೂ ನನ್ನೆದುರಿಗಿದ್ದಾರೆ ಎಂದಾಗ, ಶುಕ ವಿಶ್ವಾಮಿತ್ರನು ಇದು ರಾಕ್ಷಸರ ಮಾಯೆಯಿರಬೇಕು, ಪರೀಕ್ಷಿಸಬೇಕು. ಅವಶ್ಯವಿದ್ದರೆ ಮರೆಯಲ್ಲಿರುತ್ತೇವೆಂದು ಮೂವರು ಹೊರಡುತ್ತಾರೆ. ನಿಜವಾದ ವಿಶ್ವಾಮಿತ್ರ, ರಾಮಲಕ್ಷ್ಮಣರು ಬರುತ್ತಾರೆ. ಸಾರಣಲಕ್ಷ್ಮಣನು ನಾವು ಮರೆಯಾಗಿ ಬಂದುದು ಉತ್ತಮವಾಯಿತು. ವಿಶ್ವಾಮಿತ್ರನ ಎದುರಿಗೆ ನಮ್ಮ ಮೋಸ ನಡೆಯುವುದಿಲ್ಲವೆನ್ನುತ್ತಾನೆ. ಶುಕವಿಶ್ವಾಮಿತ್ರರು ನಾವು ಏನಾದರೂ ಅನಾಹುತಕ್ಕೆ ಕಾರಣವಾಗಬಹುದೆನ್ನುತ್ತಾನೆ. ಲಂಕಾಪಟ್ಟಣದಲ್ಲಿ ವಿಶಿಷ್ಟಮಂತ್ರಿಗಳೊಡನೆ ಆಲೋಚಿಸಿ ಆನಂತರ ಸರಿಯಾದುದನ್ನು ಮಾಡೋಣವೆಂದು ಹೊರಡುತ್ತಾರೆ.

ಶತಾನಂದರು ರಾಮಲಕ್ಷ್ಮಣರನ್ನು ಜನಕರಿಗೆ ಪರಿಚಯಿಸುತ್ತಾನೆ. ವಿಶ್ವಾಮಿತ್ರನು ರಾಮನು ತಾಟಕಿ, ಸುಬಾಹು ಮಾರೀಚರನ್ನು ಕೊಂದ ಕಥೆಯನ್ನು ಹೇಳುತ್ತಾನೆ. ನಿಮಗಿಂತಲೂ ಮುಂಚಿತವಾಗಿ ರಾಮಲಕ್ಷ್ಮಣರೊಡನೆ ವಿಶ್ವಾಮಿತ್ರನು ಬಂದಿರುವನೆಂದು ಜನಕ ತಿಳಿಸುತ್ತಾನೆ. ಅದು ಮಾಯಾವಿಯಾದ ರಾವಣನು ನಿಮ್ಮನ್ನು ವಂಚಿಸುವುದಕ್ಕೆ ಈ ರೀತಿ ಮಾಡಿರಬಹುದು ಎಂದು ಅವರನ್ನು ಹುಡುಕಿಸುತ್ತಾರೆ. ಅವರು ಸಿಗುವುದಿಲ್ಲ. ಇವರೇ ನಿಜವಾದವರೆಂದು ಶತಾನಂದರು ತಿಳಿಸುತ್ತಾರೆ. ಆದರೆ ಜನಕನಿಗೆ ಧೈರ್ಯಸಾಲುವುದಿಲ್ಲ, ಶಿವಧನುಸ್ಸಿನ ಪಂಥವನ್ನೇರ್ಪಡಿಸುವುದಾಗಿ ಜನಕ ತಿಳಿಸುತ್ತಾನೆ. ಗಂಧರ್ವ, ದೇವ ರಾಕ್ಷಸರಾದಿಯಾಗಿ ಯಾರು ಧನುಸ್ಸನ್ನು ಎತ್ತಲಾರರೆಂದು ಪರಮೇಶ್ವರನು ಹೇಳಿರುವ ವಿಚಾರವನ್ನು ಜನಕ ತಿಳಿಸುತ್ತಾನೆ. ಧನುಸ್ಸಿನೊಡನೆ ಶಿವಾನಂದರು, ಸಖಿಯರೊಡನೆ ಜಾನಕಿಯು ಪ್ರವೇಶಿಸುತ್ತಾರೆ. ಧನುಸ್ಸನ್ನು ರಾಮನು ಮುರಿದು ಬಿಡುವನು. ಸಂತಸಗೊಂಡ ಜನಕ ಜಾನಕಿಯನ್ನು ಕುರಿತು, ಶಶಿಮುಖಿ ಧನುಸ್ಸನ್ನೆತ್ತಿದ ದಶರಥನ ಮಗನನ್ನು ಪುಷ್ಪಮಾಲಿಕೆಯಿಂದ ಅಲಂಕರಿಸು ಎನ್ನುತ್ತಾನೆ. ಸೀತೆಯು ಮಾಲೆ ಹಾಕುತ್ತಾಳೆ.

ದಶರಥನನ್ನು ಕರೆಸಿಕೊಂಡು ಮಿಥಿಲಾಪಟ್ಟಣಕ್ಕೆ ಹೋಗಿ ರಾಜ ವೈಭವದಿಂದ ವಿವಾಹ ಮಾಡುವುದು ಸೂಕ್ತವಲ್ಲವೇ? ಎಂದಾಗ ವಿಶ್ವಾಮಿತ್ರ ಸಮ್ಮತಿಸುತ್ತಾನೆ. ಅಷ್ಟರಲ್ಲಿ ಪರಶುರಾಮನು ಕೋಪಿಷ್ಠನಾಗಿ ಗಂಡುಗೊಡಲಿಯನ್ನು ಹಿಡಿದುಕೊಂಡು ಆಶ್ರಮದ

ಕಡೆ ಬರುತ್ತಿರುವ ವಿಷಯು ತಿಳಿಯುತ್ತದೆ. ಎಲ್ಲರೂ ಆತಂಕಗೊಂಡಾಗ ವಿಶ್ವಾಮಿತ್ರನು ತನ್ನ ಶಿಷ್ಯ ಕಶ್ಯಪನನ್ನು ಕರೆದು, ಜನಕನು ರಾಮನಿಂದ ಶಿವಧನಸ್ಸನ್ನು ಮುರಿಸಿ ಪರಮೇಶ್ವರ ಭಕ್ತರಿಗೆಲ್ಲಾ ಅವಮಾನ ಉಂಟು ಮಾಡುತ್ತಿರುವನೆಂದು ತಿಳಿಸಿ ರಾವಣನು ಪರಶುರಾಮನನ್ನು ಕಳುಹಿಸಿರುವನಂತೆ ಎಂದು ಕಂಚುಕಿ ತಿಳಿಸಿದಾಗ ವಿಶ್ವಾಮಿತ್ರ ಮತ್ತಷ್ಟು ಕೋಪಗೊಳ್ಳುತ್ತಾನೆ. ವಿಶ್ವಾಮಿತ್ರರ ಶಿಷ್ಯರ ಪ್ರಯತ್ನಗಳೆಲ್ಲಾ ವಿಫಲವಾಗಿ ಪರಶುರಾಮ ಆಶ್ರಮ ಪ್ರವೇಶ ಮಾಡುತ್ತಾನೆ. ವಿಶ್ವಾಮಿತ್ರರು ಎಲ್ಲರನ್ನು ಪರ್ಣಶಾಲೆಯಲ್ಲಿರಿ, ನಾನು ಹೋಗಿ ಅವನನ್ನು ಸಮಾಧಾನ ಪಡಿಸುತೇನೆಂದು ಹೊರಡುತ್ತಾರೆ. ನಾನು ಜೀವಂತವಾಗಿದ್ದಾಗಲೇ ಶಿವಧನುಸ್ಸಿಗೆ ಅವಮಾನವಾಯಿತೆ ಎಂದು ಪರಶುರಾಮ ಸಿಟ್ಟಿಗೇಳುತ್ತಾನೆ. ವಿಶ್ವಾಮಿತ್ರ ಪರಶುರಾಮನನ್ನು ಈ ಘಾತುಕತನವು ದೋಷಕರವಲ್ಲದೆ ಶ್ಲಾಘನೀಯವಾದುದಲ್ಲ. ಇನ್ನಾದರೂ ಆಯುಧವನ್ನು ಬಿಟ್ಟು ಶಾಂತ ಮನಸ್ಸಿನಿಂದ ಯೋಗಾಭ್ಯಾಸದಿಂದ ಪರಿಶುದ್ಧ ಮಾರ್ಗದಲ್ಲಿ ನಡೆಯಿರೆನ್ನುತ್ತಾನೆ. ಬಗ್ಗಿಸುವುದಕ್ಕೆ ಹೋದಕೂಡಲೇ ಆಕಸ್ಮಾತ್ ಅದು ಮುರಿದು ಹೋಯಿತು. ನೀನು ಕೋಪಗೊಳ್ಳದೆ ಶಾಂತನಾಗೆಂದು ವಿಶ್ವಾಮಿತ್ರನು ವಿನಂತಿಸುತ್ತಾನೆ. ಅವನಿಗೆಷ್ಟು ಕೊಬ್ಬಿದೆ ಕರೆಯಿಸೆಂದು ಪರಶುರಾಮ ಆರ್ಭಟಿಸುತ್ತಾನೆ. ರಾಮನು ಇನ್ನು ಬಾಲಕ ಅವನಲ್ಲಿ ಗರ್ವವಿಲ್ಲವೆಂದು ವಿಶ್ವಾಮಿತ್ರ ಪರಶುರಾಮನನ್ನು ಸಮಾಧಾನಪಡಿಸಲು ಪ್ರಯತ್ನಿಸುತ್ತಾನೆ.

ನಿನ್ನ ಬ್ರಹ್ಮಶಕ್ತಿಯು, ತಪಶ್ಯಕ್ತಿಯು, ಪೌರೋಹಿತ್ಯಕ್ಕೆ ಇಳಿಯಿತೆ? ಎಂದು ವಿಶ್ವಾಮಿತ್ರನ್ನು ಪರಶುರಾಮ ಟೀಕಿಸುತ್ತಾನೆ. ಜಮದಗ್ನಿ ನೀನಿನ್ನು ನನಗಿಂತ ಚಿಕ್ಕವನಾಗಿದ್ದು, ಈ ರೀತಿ ದುಡುಕಿನಿಂದ ಮಾತಾನಾಡುವುದು ಸರಿಯಿಲ್ಲವೆಂದಾಗ, ಪರಶುರಾಮ ಶಾಂತನಾಗಿ ನಿಮ್ಮೊಡನೆ ಬರುತ್ತೇನೆ. ನಿಮ್ಮ ಶಿಷ್ಯನ ಮದುವೆಯಲ್ಲಿ ನನಗೇನು ದಕ್ಷಿಣೆ ಕೊಡಿಸುತ್ತೀರಿ ಹೇಳಿರೆನ್ನುತ್ತಾನೆ. ವಿಶ್ವಾಮಿತ್ರನು ಯೋಗ್ಯತಾನುಸಾರ ಎಂದಾಗ, ಪರಶುರಾಮನು ನಾನು "ರಾಮನು ಸೀತೆಗೆ ಕಟ್ಟುವ ತಾಲಿಯನ್ನು ಹೊರತು ಮತ್ತಾವದನ್ನು' ಸ್ವೀಕರಿಸುವುದಿಲ್ಲ, ಅದನ್ನು ಕೊಡಿಸು ಅದೇ ತಾಲಿಯನ್ನೇ ರಾವಣಾಸುರನ ಕೈಯಲ್ಲಿ ಸೀತೆಗೆ ಕಟ್ಟಿಸುತ್ತೇನೆ" ಎನ್ನುತ್ತಾನೆ. ವಿಶ್ವಾಮಿತ್ರನು ಅದು ನಿನ್ನಿಂದಲು ಸಾಧ್ಯವಿಲ್ಲ. ನಿನ್ನ ಆಚಾರ್ಯ ಮುಕ್ಕಣ್ಣನಿಂದಲೂ ಸಾಧ್ಯವಿಲ್ಲವೆನ್ನುತ್ತಾನೆ. ವಿಶ್ವಾಮಿತ್ರ ಪರಶುರಾಮರು ಹೊಡೆದಾಡುತ್ತಾರೆ. ಇಬ್ಬರೂ ಮತ್ತಷ್ಟು ಕೋಪಿಸಿಕೊಂಡು ಯುದ್ಧಕ್ಕಿಳಿದಾಗ ರಾಮನು ಪ್ರವೇಶಿಸುತ್ತಾನೆ. ರಾಮನು ಪರಶುರಾಮನ ಕೊಡಲಿಯನ್ನು, ಮೊದಲು ಅದು ಕೆಲಸ ಮಾಡಿರಬಹುದು. ಈಗ ಕಾಯಿಪಲ್ಯವನ್ನು ಹಚ್ಚುವುದಕ್ಕು ಉಪಯೋಗವಾಗುವುದಿಲ್ಲ. ಇದನ್ನು ಬಿಸಾಡಿ, ಧನುರ್ಧಾರಿಯಾಗಿ ನಿಲ್ಲು, ವಿಶ್ವಾಮಿತ್ರನ ಶಿಷ್ಯನ ಪರಾಕ್ರಮವೂ, ಪರಮೇಶ್ವರನ ಶಿಷ್ಯನ ಪರಾಕ್ರಮವೂ ಪ್ರಪಂಚಕ್ಕೆ ತಿಳಿಯಲಿ ಬಾ ಎನ್ನುತ್ತಾನೆ. ವೈಷ್ಣವ ಧನುಸ್ಸಿಗೆ ನೀನು ಹೆದೆಯನ್ನು ಕಟ್ಟಿದರೆ ಯುದ್ಧಮಾಡಲು ಶಕ್ತ ಎಂದು ಧನಸ್ಸು ನೀಡುತ್ತಾನೆ. ರಾಮ ಧನುಸ್ಸನ್ನು ಹಿಡಿದುಕೊಂಡು ಪರಶುರಾಮನ

ಸತ್ವವನ್ನು ಎಳೆದುಕೊಳ್ಳುತ್ತಾನೆ. ಪರಶುರಾಮನು ಪರಾಜಿತನಾದೆನೆಂದು ಒಪ್ಪಿಕೊಳ್ಳುವುದರ ಜೊತೆಗೆ, ನನ್ನ ಅಜ್ಞಾನ ಹೋಗಿ ಜ್ಞಾನೋದಯವಾಗಿದೆ. ಸಂತೋಷವಾಗಿದೆ. ಇನ್ನು ಮೇಲೆ ತಪೋನಿಷ್ಠನಾಗಿ ಮಹೇಂದ್ರ ಪರ್ವತಕ್ಕೆ ಹೋಗುವೆನೆನ್ನುತ್ತಾನೆ. ಪರಶುರಾಮನು ರಾಮನನ್ನು ಸೀತಾಸಮೇತನಾಗಿ ಸಕಲಸಂಪತ್ತನ್ನು ಅನುಭವಿಸಿರೆಂದು ಆಶೀರ್ವದಿಸುತ್ತಾನೆ.

## 5ನೇ ಅಂಕ

ರಾಕ್ಷಸ ಭಟನಾದ ವಿರಾಧನನ್ನು ರಾಮನನ್ನು ಸಂಹಾರ ಮಾಡುವುದಕ್ಕಾಗಿ ಕಳಿಸಲಾಗಿದೆ. ಆದರೆ ವಿರಾಧನು ಸೀತೆಯನ್ನು ಅಪಹರಿಸುವ ಮೂಲಕ ಅವಳನ್ನು ತನ್ನವಳನ್ನಾಗಿ ಮಾಡಿಕೊಳ್ಳುವ ಆಲೋಚನೆ ಮಾಡುತ್ತಾನೆ. ರಾಮನು ದುಃಖದಿಂದ ಪ್ರಾಣ ಬಿಡುವನೆಂದು ತಿಳಿಯುತ್ತಾನೆ. ಸೀತೆಗೆ ಮನಸೋತು ದುಃಖಪಡುತ್ತ ಊಟಮಾಡದೆ ಪ್ರಾಣಬಿಡುವ ಸ್ಥಿತಿಗೆ ಬಂದು ತಲುಪಿದ್ದಾನೆ. ಶೂರ್ಪನಖಿಯು ಲಂಕಾಪಟ್ಟಣದ ಬಗ್ಗೆ ಆಸೆ ಬಿಟ್ಟು ನನಗೆ ತಕ್ಕ ವರನನ್ನು ವರಿಸಿ ಸುಖದಿಂದಿರುವೆನೆಂದು ತೀರ್ಮಾನ ತೆಗೆದುಕೊಳ್ಳುತ್ತಾಳೆ. ರಾಮನಂಥ ಸುಂದರ ಮೂರ್ತಿಯನ್ನು ನೋಡಿದ ಕೂಡಲೆ ಹೇಗೇಗೋ ಅನ್ನಿಸುತ್ತಿದೆ. ಅವನನ್ನು ಸ್ವಯಂವರ ಮಾಡಿಕೊಂಡು ಸುಖದಿಂದಿರುವೆನು. ಅವನು ಏಕಾಂಗಿಯಾಗಿರುವಾಗ ಅವನ ಬಳಿಗೆ ಸೀತೆಯ ರೂಪಿನಿಂದ ಹೋಗಿ, ಅವನ ಆಲಿಂಗನ ಚುಂಬನಗಳ ಸುಖವೆಲ್ಲವನ್ನು ನನ್ನದಾಗಿಸಿಕೊಳ್ಳುವೆನೆಂದು ಉಪಾಯ ಹೂಡುತ್ತಾಳೆ. ರಾಮನ ರೂಪಿನಿಂದ ವಿರಾಧ, ಸೀತೆಯ ರೂಪಿನಿಂದ ಶೂರ್ಪನಖಿ ಕಾಣಿಸಿಕೊಳ್ಳುತ್ತಾರೆ. ವಿರಾಧರಾಮನು ರಾವಣ ಸೀತೆಗೋಸ್ಕರ ಪೇಚಾಡಿದರೆ, ನನ್ನಂಥವರು ಎಷ್ಟು ಪೇಚಾಡಬೇಕು? ಎಂದು ಚಿಂತಿಸಿ ಸೀತೆಯನ್ನು ಅಪಹರಿಸಲು ಸಿದ್ಧನಾಗುತ್ತಾನೆ. ಶೂರ್ಪನಖಿ ಸೀತೆಯು ಇದುವರೆಗೂ ಜೊತೆಯಲ್ಲಿಯೇ ಬೇಟೆಯಾಡುತ್ತಿದ್ದ ರಾಮಲಕ್ಷ್ಮಣರು ಬೇರೆಬೇರೆಯಾದರು. ರಾಮ ಈ ಕಡೆಯೇ ಬರುತ್ತಿದ್ದಾನೆ ಚಂಪಕಪುಷ್ಪಗಳನ್ನು ಕೊಯ್ಯುವಂತೆ ಸಂಚರಿಸುತ್ತ ಅವನ ದಾರಿಗೆ ಅಡ್ಡಲಾಗಿ ಬಂದು ಮೋಹ ಹೆಚ್ಚಿಸುತ್ತ ಅವನನ್ನು ಎತ್ತಿಕೊಂಡು ಹೋಗುವೆನೆಂದು ಕಾರ್ಯ ಪ್ರವೃತ್ತಳಾಗುತ್ತಾಳೆ.

ವಿರಾಧರಾಮನು ಸೀತೆಯು ಚಂಪಕವನಕ್ಕೆ ಬಂದಿದ್ದಾಳೆಂದು ತಿಳಿದು, ಹೆಂಗಸರಿಗೂ ಗಂಡಸರಂತೆಯೇ ಚಪಲ. ನಾನು ಈ ರೂಪಿನಿಂದ ಅವಳ ದಾರಿಗೆ ಅಡ್ಡಲಾಗಿ ಹೋಗಿ ಪ್ರಥಮಾಲಿಂಗನವನ್ನು ಅನುಭವಿಸುತ್ತೇನೆಂದು ಸಂಭ್ರಮಿಸುತ್ತಾನೆ. ಇಬ್ಬರೂ ಮುಂದೆ ಹೆಜ್ಜೆ ಹಾಕುತ್ತಾರೆ, ಶೂರ್ಪನಖಿ ಸೀತೆ ತನ್ನ ಯೋಜನೆಯಂತೆ ಮತ್ತಷ್ಟು ದೂರ ಹೋಗುತ್ತಾಳೆ, ವಿರಾಧರಾಮನು ಚಂಪಕಪುಷ್ಪವನ್ನು ಮುಡಿಗೆ ಮುಡಿಸುತ್ತಾನೆ. ಶೂರ್ಪನಖಿ ದೊಡ್ಡ ಕೊಂಬೆಯಲ್ಲಿರುವ ಹೂಗಳು ರಮಣೀಯವಾಗಿವೆ ಎಂದಾಗ, ಅವಳನ್ನು ತನ್ನ

ಹೆಗಲ ಮೇಲೆ ಹೊತ್ತುಕೊಂಡು ಹೂಗಳನ್ನು ಕೀಳುವಂತೆ ಸೂಚಿಸುತ್ತಾನೆ. ವಿರಾಧ ರಾಮನ ಮೇಲೆ ತನ್ನ ನಿಜರೂಪದಿಂದ ಶೂರ್ಪನಖಿ ನಿಲ್ಲುತ್ತಾಳೆ. ರಾಮಲಕ್ಷ್ಮಣರು ಮರೆಯಿಂದ ಒಬ್ಬ ರಾಕ್ಷಸಿಯು ಒಬ್ಬ ರಾಕ್ಷಸನ ಮೇಲೆ ಹತ್ತಿನಿಂತಿರುವುದನ್ನು ಕಾಣುತ್ತಾರೆ. ವಿರಾಧ ನನಗೆ ಹೆಂಡತಿಯಿಲ್ಲವೆಂದು, ಶೂರ್ಪನಖಿ ನನಗೆ ಗಂಡನಿಲ್ಲವೆಂದುಕೊಂಡು ಒಗ್ಗೂಡುತ್ತಾರೆ. ರಾಮಲಕ್ಷ್ಮಣರಿಗೆ ನಿಜಸ್ವರೂಪ ತಿಳಿಯುತ್ತದೆ.

ರಾಮನು ಲಕ್ಷ್ಮಣನಿಗೆ ನಾನು ರಾಕ್ಷಸನನ್ನು ವಿಚಾರಿಸಿಕೊಳ್ಳುವನೆಂದು ನೀನು ಆ ರಾಕ್ಷಸಿಯನ್ನು ಕೊಲ್ಲದೆ ವಿರೂಪ ಮಾಡಿಬಿಡು ಎನ್ನುತ್ತಾನೆ. ರಾಮನಿಂದಾಗಿ ವಿರಾಧ ಸಾಯುತ್ತಾನೆ. ಲಕ್ಷ್ಮಣ ಶೂರ್ಪನಖಿಯ ಕಿವಿ ಮತ್ತು ಮೂಗನ್ನು ಕೊಯ್ಯುತ್ತಾನೆ. ಇಷ್ಟೆ ಸಾಕೆಂದು ರಾಮ ಸೂಚಿಸಿದಾಗ ಇಬ್ಬರು ತಮ್ಮ ಪಾಳಯಕ್ಕೆ ಹೊರಡುತ್ತಾರೆ. ಶೂರ್ಪನಖಿ ವಿರೂಪಳಾದೆ, ಮೊಂಡ ಮೂಗಿನ ಮಾರಿಯಾದೆ, ಮೋಟಕಿವಿಯ ರಂಡೆಯಾದೆ, ನೋಡುಗರಿಗೆ ಹಾಸ್ಯವಾದೆ ಎಂದು ದುಃಖಿಸುತ್ತಾಳೆ. ಜನಕರಾಯನ ಅರಮನೆಯಲ್ಲಿ ಭೋಜನವಾದ ಮೇಲೆ ತಾಂಬೂಲವಗಿಯುತ್ತಿರುವ ರಾಮಾಚಾರಿ, ಶೇಷಯ್ಯಂಗಾರಿ, ತಿಮ್ಮಣ್ಣಶಾಸ್ತ್ರಿ, ಮೊದಲಾದ ಬ್ರಾಹ್ಮಣರು ಜನಕರಾಜನ ಮಗಳ ಮದುವೆಯ ಸಂಭ್ರಮವನ್ನು ಕೊಂಡಾಡುತ್ತಿದ್ದಾರೆ. ವಿಶ್ವಾಮಿತ್ರರ ಪಟ್ಟಿಗೆ ಸೇರಿದವರಿಗೆ ಕೆಂಪು ಶಾಲು, ಶತಾನಂದರ ಪಟ್ಟಿಗೆ ಸೇರಿದವರಿಗೆ ಕಪ್ಪುಶಾಲು, ಮುಖ್ಯಸ್ಥರಿಗೆ ಎರಡೂ ಉಡುಗೊರೆಗಳು ಸಿಕ್ಕಿವೆ.

ಸೀತಾರಾಮರಿಗೆ ಪಾಣಿಗ್ರಹಣವಾದ ಮೇಲೆ ದಶರಥನು ಮಗನಿಗೆ ಪಟ್ಟಾಭಿಷೇಕವನ್ನು ಜನಕರಾಯನು, ಮನೆಯಲ್ಲೇ ಮಾಡಿಬಿಟ್ಟ ವಿಚಾರ ಚರ್ಚಿಸುತ್ತಾರೆ. ರಾಮಾಚಾರಿಯು ವಿಷಯವನ್ನು ತಿಳಿಸಲು ಕೇಳಿದಾಗ ಕೇಶವಭಟ್ಟರು ರಾವಣ ಸೀತೆಯಲ್ಲಿ ಮೋಹಗೊಂಡದ್ದು, ಶೂರ್ಪನಖಿ ಸೀತೆಯನ್ನು ತರುವುದಕ್ಕೆ ಹೋದದ್ದು, ಅವಳು ವಿರೂಪಳಾಗಿ ಬಂದದ್ದು, ರಾವಣ ಇದರಿಂದಾಗಿ ಸತ್ತದ್ದು ಲಂಕಾಪಟ್ಟಣ ಸುಟ್ಟು ಹೋದದ್ದು, ಮೊದಲಾದ ವಿಷಯವನ್ನು ತಿಳಿಸುತ್ತಾರೆ. ತನ್ನ ಬಾಲಕ್ಕೆ ಬಿದ್ದ ಬೆಂಕಿಯನ್ನು ಆರಿಸಲು ಕಪಿಯು ಲಂಕಾಪಟ್ಟಣ ಸೇರುತ್ತಾನೆ. ಬಾಲವನ್ನು ಬಡಿದಂತೆ ಮನೆಗಳು ಹತ್ತಿಕೊಳ್ಳುತ್ತವೆ. ಕಡೆಗೆ ಕುಂಭಕರ್ಣನ ಮನೆಗೆ ಬೆಂಕಿಬೀಳುತ್ತದೆ. ಇಂದ್ರಜಿತು ಮತ್ತು ರಾಕ್ಷಸ ಭಟರೆಲ್ಲಾ ಕುಂಭಕರ್ಣನನ್ನು ಎಬ್ಬಿಸುವ ಪ್ರಯತ್ನದಲ್ಲಿದ್ದಾಗ ಜ್ವಾಲೆಯು ಪ್ರಜ್ವಲಿಸಿ ಮನೆಯು ಕುಸಿದು ದಾನವ ಕುಲದ ಮೇಲೆ ಬೀಳುತ್ತದೆ. ಕೇಶವಭಟ್ಟರು ಲಂಕೆಯಲ್ಲಿ ಸಾಮಾನು ಸರಂಜಾಮುಗಳನ್ನು ಬೇಕಾದ ಹಾಗೆ ಕೊಡುತ್ತಿದ್ದಾರೆ ಬನ್ನಿ ಹೋಗೋಣವೆಂದು ಉಳಿದವರಿಗೆ ತಿಳಿಸುತ್ತಾರೆ. ರಾಮಾಚಾರಿಯವರು 'ಸೀತಾರಾಮರ ವಿವಾಹ ಪಟ್ಟಾಭಿಷೇಕಗಳು ಈ ದಿವಸ ಪೂರೈಸಿ ಬೀಗರ ಔತಣ ಬಹಳ ಚೆನ್ನಾಗಿ ಆಗುವುದು, ಅದನ್ನು ನೋಡಿಕೊಂಡು ಲಂಕಾಪಟ್ಟಣಕ್ಕೆ ನಾಳೆ ಹೋಗೋಣ ಎಂದು ತೀರ್ಮಾನಿಸುತ್ತಾರೆ.

## II (ಅ) 'ಸೀತಾಸ್ವಯಂವರ' ನಾಟಕದ ಪುರುಷ ಪಾತ್ರಗಳು

**ರಾವಣ–** ಜನಕನ ಮಗಳಾದ ಜಾನಕಿಯನ್ನು ಮೆಚ್ಚಿಕೊಂಡ ಈತ ತನ್ನ ಮಂತ್ರಿಗಳ ಸಲಹೆಯಂತೆ ರಾಮನ ವೇಷತೊಟ್ಟು ಆಕೆಯನ್ನು ಪಡೆಯಲು ಪ್ರಯತ್ನಿಸುತ್ತಾನೆ. ತಿರಸ್ಕರಣೀ ವಿದ್ಯೆಯಿಂದಾಗಿ ಕೌಶಿಕಾಶ್ರಮದ ಬಳಿ ಸೀತೆಯನ್ನು ಮರೆಯಿಂದ ನೋಡಿ, ಜನಕನ ಆಶ್ರಯಕ್ಕೆ ಬರುತ್ತಾನೆ. ನಿಜವಿಶ್ವಾಮಿತ್ರರ ಪ್ರವೇಶದಿಂದಾಗಿ ಭಯಗೊಂಡು ಲಂಕೆಗೆ ಪಲಾಯನ ಮಾಡುತ್ತಾನೆ. ಪರಶುರಾಮನನ್ನು ವಿಶ್ವಾಮಿತ್ರನ ವಿರುದ್ಧ ಹೋರಾಡಲು ಸಿದ್ಧಗೊಳಿಸುತ್ತಾನೆ. ವಿರಥ ಶೂರ್ಪನಖಿಯರ ಪ್ರಯತ್ನವೂ ಯಶಸ್ವಿಯಾಗುವುದಿಲ್ಲ. ಸೀತೆಯ ಕೊರಗಿನಲ್ಲಿಯೇ ಸಾವನ್ನಪ್ಪುತ್ತಾನೆ. ದುರಂತ ನಾಯಕನಾಗಿ ಚಿತ್ರಿತವಾಗಿರುವ ರಾವಣ ಓದುಗರ ಮನದಲ್ಲಿ ನಿಲ್ಲುತ್ತಾನೆ.

**ರಾಮ–** ರಾಮನಿಗೆ ಸೀತೆಯಲ್ಲಿ ಅನುರಾಗವಿದೆ. ಮಾಯಾಪಿಂಗಳ ಮಾಯಾಸೀತೆಯನ್ನು ತೋರಿಸಿ, ರಾಮನಲ್ಲಿ ಅವಳ ಬಗ್ಗೆ ಆಸೆ ಹುಟ್ಟಿಸುತ್ತಾನೆ. ರಾಮನಿಗೆ ಸೀತೆಯ ಚಪಲ ಹೆಚ್ಚಾಗುತ್ತದೆ. ಆಕೆ ಬೆಂಕಿಯಲ್ಲಿ ಬಿದ್ದಾಗ, ರಾಮನು ತಾನು ಬೀಳಲು ಬಂಡೆಯ ಮೇಲೆ ಕಾಲಿಡುತ್ತಾನೆ. ಅದು ಅಹಲ್ಯೆಯಾಗಿ ಪರಿವರ್ತನೆಯಾಗುತ್ತದೆ. ರಾಮ ಮಾಯಾರಾಕ್ಷಸರನ್ನು ಕೊಲ್ಲುತ್ತಾನೆ. ಸ್ವಯಂವರ ಗೆದ್ದು, ಸಂಭ್ರಮಪಟ್ಟು ಪರಶುರಾಮನನ್ನು ಗೆದ್ದು ಅವನ ಮನವನ್ನು ಒಲಿಸಿಕೊಂಡು ವಿರಾಧನನ್ನು ರಾಮ ಕೊಲ್ಲುತ್ತಾನೆ. ರಾಮನು ಮಾಯಾಸೀತೆಯನ್ನು ಸಂದಿಸುವ ಪ್ರಸಂಗ ರಾಮಾಯಣದ ಬಾಲಕಾಂಡದಲ್ಲಿಲ್ಲ. ಹಾಗು ಅಹಲ್ಯೆಯ ಶಾಪವಿಮೋಚನೆಯಲ್ಲಿ ಹೊಸತನವು ಗೋಚರಿಸುತ್ತದೆ.

**ವಿಶ್ವಾಮಿತ್ರ–** ಜನಕರಾಯನ ಆಸೆಯಂತೆ, ವಿಶ್ವಾಮಿತ್ರನು ತನ್ನ ಯಜ್ಞವನ್ನು ಕಾಪಾಡುವುದಕ್ಕಾಗಿ ರಾಮನನ್ನು ಕರೆದುಕೊಂಡು ಬರುವೆನೆಂದು ಸುದ್ದಿ ಹಬ್ಬಿಸಿ ಅಯೋಧ್ಯೆಗೆ ಹೋಗಿದ್ದಾನೆ. ಸೀತೆಯು ರಾಕ್ಷಸಾಂಧೀಕರಣವೆಂಬ ಮಣಿಗಳಿಂದ ರಾಕ್ಷಸರ ಕಣ್ಣಿಗೆ ಕಾಣಿಸಿದಂತೆ ಮಾಡಿದ್ದಾನೆ. ರಾಮ–ಸೀತೆಯರ ವಿವಾಹ ನಡೆಯಬೇಕೆಂಬ ಜನಕನ ಆಸೆಗೆ ಸ್ಪಂದಿಸಿದ್ದಾನೆ. ಪರಶುರಾಮ ಕೋಪಿಸಿಕೊಂಡು ಬಂದಾಗ ವಿಶ್ವಾಮಿತ್ರರು ಅವನನ್ನು ಸಮಾಧಾನ ಪಡಿಸಲು ಪ್ರಯತ್ನಿಸುತ್ತಾನೆ. ತನ್ನ ಶಿಷ್ಯ ರಾಮನ ಯಶಸ್ಸಿಗೆ ವಿಶ್ವಾಮಿತ್ರರು ಪ್ರೇರಕರಾಗುತ್ತಾರೆ. ಅವನ ವಿವಾಹದ ಮುಂದಾಳತ್ವ ವಹಿಸುತ್ತಾರೆ.

**ಪರಶುರಾಮ–** ಈತನು ಪರಮೇಶ್ವರನ ಭಕ್ತ. ಜನಕನು ರಾಮನಿಂದ ಶಿವಧನಸ್ಸನ್ನು ಮುರಿಸಿ ಪರಮೇಶ್ವರನ ಭಕ್ತರಿಗೆಲ್ಲ ಅವಮಾನ ಉಂಟುಮಾಡುತ್ತಿರುವನೆಂದು ರಾವಣ ತಿಳಿಸಿದ್ದರಿಂದ ವಿಶ್ವಾಮಿತ್ರನ ಆಶ್ರಮದ ಕಡೆ ಬಂದು ರಾಮನ ಮೇಲೆ ಯುದ್ಧಕ್ಕೆ

ನಿಲ್ಲುತ್ತಾನೆ. ವಿಶ್ವಾಮಿತ್ರರನ್ನು ಟೀಕಿಸುತ್ತಾನೆ. ನಿನ್ನ ಶಿಷ್ಯನ ಮದುವೆಯಲ್ಲಿ ಅವನು ಸೀತೆಗೆ ಕಟ್ಟುವ ತಾಲಿಯನ್ನು ಕೊಡಿಸು, ನಾಮ ರಾವಣನ ಕೈಯಲ್ಲಿ ಸೀತೆಗೆ ಕಟ್ಟಿಸಿ ಸಂತೋಷಪಡುತ್ತೇನೆ ಎಂದು ತಿಳಿಸುತ್ತಾನೆ. ಕಡೆಗೆ ರಾಮನ ಪೌರುಷವನ್ನು ಮೆಚ್ಚಿ ಅವನನ್ನು ಸೀತಾಸಮೇತವಾಗಿ ಸಕಲಸಂಪತ್ತನ್ನು ಅನುಭವಿಸಿರೆಂದು ಆಶೀರ್ವದಿಸಿ, ನಂತರ ತಪೋನಿಷ್ಠನಾಗಿ ಮಹೇಂದ್ರ ಪರ್ವತಕ್ಕೆ ಹೋಗಲು ನಿರ್ಧರಿಸುತ್ತಾನೆ.

**ವಿರಾಧ–** ರಾಕ್ಷಸಭಟನಾದ ಇವನನ್ನು ರಾಮನನ್ನು ಸಂಹಾರ ಮಾಡುವುದಕ್ಕಾಗಿ ಕಳಿಸಲಾಗಿದೆ. ವಿರಾಧನಿಗೆ ಸೀತೆಯನ್ನು ತನ್ನವಳನ್ನಾಗಿ ಮಾಡಿಕೊಳ್ಳುವ ವ್ಯಾಮೋಹ. ಶೂರ್ಪನಖಿ ಸೀತೆಯ ವೇಷವನ್ನು ತೊಟ್ಟಿದ್ದರಿಂದ, ರಾಮನ ವೇಷತೊಟ್ಟ ಈತ ಅವಳನ್ನೇ ಸೀತೆಯೆಂದು ಭ್ರಮಿಸಿ ಶೂರ್ಪನಖಿಯನ್ನು ವರಿಸುತ್ತಾನೆ. ಇವನು ನಿಜರೂಪ ತಾಳಿದಾಗ ರಾಮನು ವಿರಾಧನನ್ನು ಕೊಲ್ಲುತ್ತಾನೆ.

**ಜನಕರಾಯ–** ಜನಕನು ಸೀತೆಯನ್ನು ರಾಮನಿಗೆ ಮದುವೆ ಮಾಡಿಕೊಡಬೇಕೆಂಬ ಉದ್ದೇಶವಿದೆ. ಅದಕ್ಕಾಗಿ ರಾಮನನ್ನು ಕರೆತರಲು ವಿಶ್ವಾಮಿತ್ರರನನ್ನು ದಶರಥನ ಬಳಿಗೆ ಕಳಿಸಿದ್ದಾನೆ. ನಂತರ ಮಗಳ ಮದುವೆಗಾಗಿ ಶಿವಧನುಸ್ಸಿನ ಪಂಥವನ್ನು ಏರ್ಪಡಿಸುತ್ತಾನೆ. ರಾಮನು ಧನುಸ್ಸನ್ನು ಮುರಿದಾಗ ಸಂತೋಷಗೊಂಡ ಜನಕ, ಮಿಥುಲಾಪಟ್ಟಣಕ್ಕೆ ಹೋಗಿ ದಶರಥನನ್ನು ಕರೆಸಿಕೊಂಡು ರಾಜವೈಭವದಿಂದ ವಿವಾಹ ಮಾಡಲು ನಿರ್ಧರಿಸುತ್ತಾನೆ.

### (ಆ) 'ಸೀತಾಸ್ವಯಂವರ' ನಾಟಕದ ಸ್ತ್ರೀ ಪಾತ್ರಗಳು

**ಸೀತೆ–** ಸೀತೆಗೆ ತನ್ನ ಕನಸಿನಲ್ಲಿ ಕಂಡ ರಾಮನನ್ನು ಮೋಹಿಸುತ್ತಾನೆ. ಹಲಗೆಯ ಮೇಲೆ ನಾಚಿಕೆಯಿಂದಲೇ ಅವನ ಚಿತ್ರಬಿಡಿಸುತ್ತಾಳೆ. ಬ್ರಾಹ್ಮಣ ವೇಷದಲ್ಲಿ ಬಂದ ಸಾರಣನನ್ನು ರಾಮನ ಮಿತ್ರನೆಂದು ತಿಳಿದು ಅವನ ವರ್ತಮಾನ ತಿಳಿದು, ಸಂತೋಷಪಟ್ಟು ವಿಶ್ವಾಮಿತ್ರ ತೊಡಿಸಿದ್ದ ಕಡಗವನ್ನು ನೀಡುತ್ತಾಳೆ. ರಾಮ ಶಿವಧನುಸ್ಸನ್ನು ಮುರಿದಾಗ, ತಂದೆ ಜನಕನ ಮಾತಿನಂತೆ ರಾಮನ ಕೊರಳಿಗೆ ಮಾಲೆಹಾಕಿ ಸಂಭ್ರಮಿಸುತ್ತಾಳೆ.

**ಶೂರ್ಪನಖಿ–** ಈಕೆ ರಾವಣನ ತಂಗಿ ತನ್ನಣ್ಣನ ಸೀತೆಯ ಹುಚ್ಚನ್ನು ತಿಳಿದು, ಸೀತೆಯನ್ನು ಅಪಹರಿಸಿಕೊಂಡು ಬರುವ ಭರವಸೆ ನೀಡಿದವಳು. ಆದರೆ ರಾಮನಲ್ಲಿ ಮೋಹಗೊಂಡು, ರಾಮನ ವೇಷದಲ್ಲಿದ್ದ ವಿರಾಧನನ್ನೆ ನಿಜವಾದ ರಾಮನೆಂದು ತಿಳಿದು ವಿವಾಹವಾಗುತ್ತಾಳೆ. ಲಕ್ಷ್ಮಣನು ಈಕೆಯ ಕಿವಿ ಮತ್ತು ಮೂಗನ್ನು ಕೊಯ್ಯುತ್ತಾನೆ. ಶೂರ್ಪನಖಿ ವಿರೂಪಳಾದೆ, ಮೊಂಡುಮೂಗಿನ ಮಾರಿಯಾದೆ ಎಂದು ದುಃಖಿಸುತ್ತಾಳೆ.

# III 'ಸೀತಾಸ್ವಯಂವರ' ನಾಟಕದ ಭಾಷಾಶೈಲಿ ಮತ್ತು ಛಂದಸ್ಸು

## 1.(ಅ) ಆಡುನುಡಿ ಬಳಕೆ

ಶ್ರೀಕಂಠೇಶಗೌಡರು ವೃತ್ತಿಜೀವನವನ್ನು ನಗರಪ್ರದೇಶದಲ್ಲಿ ಕಳೆದರೂ, ಅವರ ಬೇರುಗಳು ಮಾತ್ರ ಗ್ರಾಮೀಣ ಪ್ರದೇಶದಲ್ಲಿಯೇ ನೆಲೆಯೂರಿದ್ದವು. ಹಳ್ಳಿಯ ಜನರೊಡನೆ ಒಡನಾಟ, ಅವರ ಗ್ರಾಮೀಣ ಭಾಷೆಯ ಹಿಡಿತವನ್ನು ಸಾಧಿಸಲು ಸಹಕಾರಿಯಾಯಿತು. ರಾಮಾಯಣದ ಕಥಾವಸ್ತುವಾಗಿದ್ದರೂ, ಈ ನಾಟಕದಲ್ಲಿ ಅಲ್ಲಲ್ಲಿ ಜನಬಳಕೆ ಪದಗಳನ್ನು ಕಾಣಬಹುದು. ಇವು ಸಹಜವಾಗಿಯೆ ನಾಟಕದ ಸೊಗಸನ್ನು ಹೆಚ್ಚಿಸಿವೆ. ಮಂಡ್ಯಭಾಗದ ಜಾನಪದ ಭಾಷೆಯು ಹೆಚ್ಚಾಗಿ ಬಳಕೆ ಆಗಿದೆ. **ಉದಾಹರಣೆ:**– ಶಿವಶಿವ (ಪುಟ–220), ಯಾವಳಲ್ಲಿ(223), ನೆನಸಿ(229), ತಲೆಕಾಯಿ(230), ದುಮಿಕಿ(245), ಮರೆಮಾಡುತ್ತೀಯ(249), ಕೊಬ್ಬೆಷ್ಟಿರುವುದು(277), ಜೈಸಿದರೆ(284), ಅಡಚನೆ(287), ಇರಿಕಿಸಿಕೊಂಡು(291), ಮದುವಿ(293), ರಂಡೀದು(293), ವಗದುಬಿಡತೇನು(294), ಮುಂಡಾಮೋಚಿತು(295), ದೌಲತ್ತು(296), ಕುಕ್ಕರಿಸಿದ್ದೀರಿ(296), ಪಟಕ್ಕನೆ(297), ಪುಟ್ಟಗೋಸಿ(299).

## (ಆ) ಸಂಸ್ಕೃತದ ಬಳಕೆ.

ಸಂಸ್ಕೃತ ಮತ್ತು ಕನ್ನಡ ಭಾಷೆಗಳ ಸಂಬಂಧ ಅನನ್ಯ ವಾದುದು. ಶ್ರೀಕಂಠೇಶಗೌಡರು ಕನ್ನಡ ಸಂಸ್ಕೃತ ಎರಡು ಭಾಷೆಗಳಲ್ಲೂ ಪರಿಣತರಾಗಿದ್ದರು. ಹೀಗಾಗಿ ಕನ್ನಡ ಮತ್ತು ಸಂಸ್ಕೃತವನ್ನು ಬಳಸಿರುವುದನ್ನು ಕಾಣುತ್ತೇವೆ. ರಂಗ ಪ್ರಯೋಗಕ್ಕಾಗಿಯೆ ಬರೆದ ನಾಟಕ ಇದು. ನಾಟಕ ನೋಡಲು ಗ್ರಾಮೀಣ ಜನತೆಯಂತೆ ನಾಗರಿಕ ಜನರೂ ಬರುತ್ತಿದ್ದರು. ಹಾಗಾಗಿ ಕನ್ನಡದ ಜನತೆ ಸಂಸ್ಕೃತವನ್ನು ಬಳಸಿದ್ದಾರೆ. **ಉದಾಹರಣೆ:**– ನಾಂದಿ(144), ದಶಗ್ರೀವನ(ಪುಟ–217), ಅಮಾತ್ಯಶ್ರೇಷ್ಠ(216), ನಿಷ್ಕ್ರಾಂತ ಸರ್ವೇ(217), ಅಭಿಜ್ಞ(219), ವ್ಯಾಕುಲ(225), ದಶಾನನ(225), ದಿಕ್ಪಾಲಕ(225), ಸುಖಿಜನವತ್ಸಲೇ(241), ಸ್ವರ್ಣಕದಗಳಿಂದ ಅಲಂಕೃತವಾದ ಕ್ರೀಡಾಶೈಲ(250), ಕೃಶಾಂಗಿಯ ಚಂಚಲಾಪಾಂಗ(251), ಪೂರ್ವಾಪರವಿಶಾಲವಾದ(253), ದೈವವಶಾತ್(254), ಸಮಾಪ್ತಿಂ(300)ಪ್ರವೇಶಕ, ಪ್ರಕಾಶ, ಜನಾಂತಿಕ, ಸ್ವಗತಂ (ಅನುಬಂಧ 2).

## (ಇ) ದ್ವಿರುಕ್ತಿ

ದ್ವಿರುಕ್ತಿಯನ್ನು ಭಾಷೆಯಲ್ಲಿನ ಕ್ರಿಯೆಗೆ ತೀವ್ರತೆಯನ್ನು ಕೊಡಲು ಬಳಸುತ್ತಾರೆ. ಒಂದು ನುಡಿಯು ಎರಡು ಸಾರಿ ಬಳಕೆಯಾಗುವ ಸಂದರ್ಭದಿಂದಾಗಿ ಸಂಭಾಷಣೆಯಲ್ಲಿ ಹಲವು ಭಾವನೆಗಳನ್ನು ವ್ಯಕ್ತಪಡಿಸಲು ಸಾಧ್ಯವಾಗುತ್ತದೆ. ಇಂತಹ ಕಡೆಯಲ್ಲಿ ಹಲವು

ದ್ವಿರುಕ್ತಿಗಳು ನಾಟಕದಲ್ಲಿ ಕಂಡುಬರುತ್ತವೆ. **ಉದಾಹರಣೆ:**– ಕೇಳಿ ಕೇಳಿ(ಪುಟ–229), ಅಯ್ಯೋ! ಅಯ್ಯೋ!(238), ಅಮ್ಮ ಅಮ್ಮ(238), ಛೀ ಛೀ(240), ಸತ್ತೆನು ಸತ್ತೆನು(246), ಪ್ರಮಾದ ಪ್ರಮಾದ(247), ಆಶ್ಚರ್ಯ! ಆಶ್ಚರ್ಯ!(253), ಕಷ್ಟ ಕಷ್ಟ(253), ರಾಶಿ ರಾಶಿ(293), ಮನೆ ಮನೆ(296), ಎತ್ತೆತ್ತ(298).

## (2) ಸೀತಾಸ್ವಯಂವರದ ಛಂದಸ್ಸು

ಶ್ರೀಕಂಠೇಶಗೌಡರು ಷೇಕ್ಸ್‌ಪಿಯರ್‌ನ ದುರಂತ ನಾಟಕವೊಂದನ್ನು ಹಾಗೂ ಪ್ರಹಸನವೊಂದನ್ನು ರೂಪಾಂತರಿಸಿದ ನಂತರ ಸ್ವತಂತ್ರ ನಾಟಕವಾಗಿ 'ಸೀತಾಸ್ವಯಂವರ' ವನ್ನು ರಚಿಸಿದ್ದಾರೆ. ಇಲ್ಲೂ ಕೂಡ ಚಂಪೂ ಶೈಲಿಯನ್ನು ಮುಂದುವರಿಸಿದ್ದಾರೆ. ರಾಮಚಂದ್ರದೇವರವರು ತಿಳಿಸಿರುವಂತೆ ರಗಳೆಗಳನ್ನು ಆಧುನಿಕ ಲೇಖಕರು ಸೃಜನಶೀಲತೆಯ ಸಂಕೇತವಾಗಿ ಬಳಸಿಕೊಳ್ಳಬಹುದು ಎಂಬುದನ್ನು ಶ್ರೀಕಂಠೇಶಗೌಡರು ತೋರಿಸಿಕೊಟ್ಟಿದ್ದಾರೆ.

### (ಅ) ಕನ್ನಡ ಮಾತ್ರಾಛಂದಸ್ಸು

ನಾಟಕಕಾರರು ಇಲ್ಲಿ **4** ರಗಳೆಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಅದಿಪ್ರಾಸ ಮತ್ತು ಅಂತ್ಯಪ್ರಾಸಗಳನ್ನು ಗುರುತಿಸಬಹುದು. ಇವುಗಳಲ್ಲಿ **3** ಹಳೆಗನ್ನಡದಲ್ಲಿದ್ದರೆ. **1** ಹೊಸಗನ್ನಡದಲ್ಲಿದೆ. ಈ ಹೊಸಗನ್ನಡ ರಗಳೆಗೆ ಜನಪದದ ಪ್ರಭಾವವಿರುವುದನ್ನು ಗುರ್ತಿಸಬಹುದು.

**ಉದಾಹರಣೆ:**– ಬಾಬಾ ಬಾಬಾ ಬಾರೆಲೆಲೋ ನೀಂ।
ಶಾಬಾಸ್ ಶಾಬಾಸ್ ಶೂರನೆ ಬಾ ನೀಂ।
ಕೊಲ್ಲಲು ರಾಮನ ಭಲ್ಲೆಯ ಬೇಡವು।
ಬಿಲ್ಲದು ಬೇಡವು ಮೆಲ್ಲಗೆ ಬಾಬಾ।
– – – – – – – – – –
ಮಾಯದಿ ಸದೆವ ನ್ಯಾಯವು ನಮಗದು (ಪುಟ–246).

ಕರ್ನಾಟಕ ವಿಷಯ ಜಾತಿ ಛಂದಸ್ಸುಗಳಲ್ಲಿ ಪ್ರಸಿದ್ಧವಾದ, ಷಟ್ಪದಿಗಳಲ್ಲಿ ಒಂದಾದ ಶರಷಟ್ಪದಿಗಳನ್ನು **12** ಕಡೆ ಬಳಸಿದ್ದಾರೆ. ಸಂಭಾಷಣೆಗಾಗಿ ಬಳಸಿಕೊಂಡಿರುವ ಷಟ್ಪದಿಗಳು ಹಲವು ಕಡೆ ಬಳಕೆಯಾಗಿವೆ. ರಾಮನ ಚಿತ್ರಪಟವನ್ನು ನೋಡಿ ಸೀತೆ ಮಾತನಾಡುವ ಶೈಲಿಯನ್ನು ಗಮನಿಸಬಹುದು.

**ಉದಾಹರಣೆ:**– ನಳಿನಾಕ್ಷನೆ ನೀಂ।
ತಳೆದಿಹೆ ಮೌನವ।
ಲಲನೆಯೊಳೇತಕೆ ಬಿಡು ಮುನಿಸಂ॥

ಒಲಿದಿಹ ನನ್ನೊಳು।
ಚಲವಿದು ಸರಿಯೇ।
ಬಳಲಿಸದೀಪರಿ ಮಾತಾಡ್ಯೆ॥ (ಪುಟ-235)

ನಾಟಕೀಯ ಶೈಲಿಯು ಪಾತ್ರಧಾರಿಗಳಲ್ಲಿ ಹೊಸ ಉತ್ಸಾಹ ತುಂಬಬಲ್ಲದು. ಇದರಿಂದಾಗಿ ನಟನಾ ಶೈಲಿಯು ಆಕರ್ಷಿತವಾಗುತ್ತದೆ. ಅಂತಹ ಶರಷಟ್ಪದಿಯೊಂದನ್ನು ಗುರುತಿಸಬಹುದು. ಜೊತೆಗೆ ಆದಿಪ್ರಾಸವು ಬಳಕೆಯಾಗಿದೆ.

**ಉದಾಹರಣೆ:-** ಸೊಕ್ಕಿದ ದಾನವು।
ಗಕ್ಕನೆ ಪಾದವ।
ನಿಕ್ಕುತ ಕುಣಿಯುವ ನೀ ಬಾರೊ॥.
ಉಕ್ಕಿಸಿ ರೋಷವ।
ಮುಕ್ಕುತ ಜನಗಳ।
ಪಕ್ಕವ ಮುರಿಯುತೆ ಬಾ ಧೀರಾ॥ (ಪುಟ-244).

ಶ್ರೀಕಂಠೇಶಗೌಡರ ಈ ನಾಟಕದಲ್ಲಿ ಅಚ್ಚಕನ್ನಡದ ಬಳಕೆ ಅಧಿಕವಾಗಿರುವ ರಚನೆಗಳು ಅಲ್ಲಲ್ಲಿ ಕಾಣುತ್ತವೆ. ಅಂತಹ ಷಟ್ಪದಿಯೊಂದನ್ನು ನೋಡಬಹುದು.

**ಉದಾಹರಣೆ:-** ನೋಡಿರಿ ನೋಡಿರಿ।
ನೋಡಿರಿ ಭಯದಿಂ।
ದೋಡುತ ಹೋಗದೆ ನೋಡಿರಿ ನೀಂ॥

ಕಾವ್ಯದ ರಚನೆಗಳಲ್ಲಿ ಭಾಮಿನೀಷಟ್ಪದಿ ಹೆಚ್ಚು ಸೂಕ್ತವಿದ್ದಂತೆ ನಾಟಕದ ರಚನೆಗಳಲ್ಲಿ ಶರಷಟ್ಪದಿ ಹೆಚ್ಚು ಅನುಕೂಲಕರವಾಗಿರುತ್ತದೆ. ಹಾಡಲು ಸುಲಭವಾಗಿ ವಿವಿಧ ಧಾಟಿಗಳಲ್ಲಿ ಅಳವಡುತ್ತದೆ. ಮತ್ತು ಹಾಡಾಗಿ ಅಳವಡಿಸಲು ಶರಷಟ್ಪದಿ ಸುಲಭವಾದ ರಚನೆ ಆಗಿರುತ್ತದೆ. **ಉದಾಹರಣೆ:-** ಕೊಬ್ಬಿದ ರಕ್ಕಸ
ರಿಬ್ಬರು ಸೇರಿದೂ
ತಬ್ಬುತ ಕುಣಿಯುವ ಬಾಬಾಬಾ॥
ಉಬ್ಬಿಸಿ ಮಯ್ಯ
ನ್ನಬ್ಬರಿಸುತ ಬಾ।
ದಬ್ಬುತ ಕುಣಿಕುಣಿವಿಬ್ಬರುವೆ॥(ಪುಟ-244)

ಅದೋ ಅಲ್ಲೊಬ್ಬ ಸಿಲ್ಲೊಬ್ಬನ ರಕ್ಕಸನು ॥ಪ॥ ಬಂದೆವು ಭೂಮಿಯ ಭೇದಿಸುತ ॥ಅ॥ ಕೊಬ್ಬಿದ ರಕ್ಕಸ। ರಿಬ್ಬರು ನಾವ್‌ಭಲ। ತಬ್ಬುತ ಕುಣಿಯುವ ಅಬ್ಬರಿಸಿ ಬಾ ಬೇಗ ॥ಅಃ॥ ಕೊಬ್ಬಿದ ನಾಪಿಬ್ಬರು ಭಲತಬ್ಬುವ। ಆಃ ತಬ್ಬುವ॥ ಇಲ್ಲಿ ಕೊಬ್ಬಿದ ರಕ್ಕಸ ತಬ್ಬುತ ಕುಣಿಯುವ ಮಾತುಗಳು ಹಾಡಿನಲ್ಲಿ ಹಾಗೆ ಅಳವಟ್ಟಿವೆ. ಉಕ್ಕಲು ರೋಷವು। ಸೊಕ್ಕಿದ ದಾನವ। ಗಕ್ಕನೆ ಪಾದವ। ನಿಕ್ಕುತ ನಾ ಬಂದೆ॥ ಬಲುಸೊಕ್ಕಿನ। ಕಡು ರಕ್ಕಸ। ಜನ ಮುಕ್ಕಿದೆ। ಬಕಬಕ್ಕನೆ। ಲಾಬಕ್ಕನೆ। ಗೊಳಕ್ಕನೆ॥ ಮೇಲೆ ಉದಾಹರಿಸಿದ (ಸೊಕ್ಕಿನ ದಾನವ) ಷಟ್ಪದಿಯಲ್ಲಿ ಸೊಕ್ಕಿದ ದಾನವಗಕ್ಕನೆ ಪಾದವ ನಿಕ್ಕುತ ನಾಬಂದೆ ಎಂಬಲ್ಲಿ ಷಟ್ಪದಿಯಲ್ಲಿರುವ ಪದಗಳು ಅನಾಮತ್ತಾಗಿ ಬಂದಿವೆ.

### (ಆ) ಸಂಸ್ಕೃತ ವೃತ್ತಗಳು

ಶ್ರೀಕಂಠೇಶಗೌಡರಿಗೆ ಸಂಸ್ಕೃತ ಭಾಷೆಯ ಆಳ ಪರಿಚಯವಿತ್ತು ಎನ್ನುವುದಕ್ಕೆ ಅವರು ಬಳಸಿರುವ ಛಂದಸ್ಸು ಸಾಕ್ಷಿಯಾಗಿದೆ. ನಾಂದಿ ಪದ್ಯಗಳಲ್ಲಿ ಖ್ಯಾತಕರ್ನಾಟಕಗಳಲ್ಲೊಂದಾದ ಸ್ರಗ್ಧರಾವೃತ್ತವನ್ನು ಬಳಸಿದ್ದಾರೆ. ಷೇಕ್ಸ್‌ಪಿಯರ್‌ನ ಬ್ಲಾಂಕ್‌ವರ್ಸ್‌ನ್ನು ವೃತ್ತವಾಗಿ ಬಳಸಿಕೊಂಡಿರುವ ಶ್ರೀಕಂಠೇಶಗೌಡರ ಈ ನಾಟಕದಲ್ಲಿ **22** ವೃತ್ತಗಳಿವೆ. ಸೀತಾಸ್ವಯಂವರದಲ್ಲಿ ಗದ್ಯದಲ್ಲಿ ಹೆಚ್ಚಾಗಿ ಹೊಸಗನ್ನಡ ಬಳಸಿದರೆ, ಪದ್ಯದಲ್ಲಿ ಹಳೆಗನ್ನಡ ಹಾಗೂ ಹೊಸಗನ್ನಡಗಳೆರಡನ್ನು ಬಳಸುತ್ತಾರೆ. ಆದಿಪ್ರಾಸವನ್ನು ಗುರುತಿಸಬಹುದು.

ಹಳೆಗನ್ನಡಕ್ಕೆ **ಉದಾಹರಣೆ:-**

ಎಳಸುತ್ತಿರ್ಪುವು ಸೀತೆಯಂನಿರುಕಿಸಲ್ಕಿರ್ಪತ್ತುಮೆನ್ನಕ್ಷಿಗಳ್॥
ಬಳದಿಂ ತೋಳ್ಗುಳುಮಂತೆ ಕಾತರಿಪುವಪ್ಪಲ್ಕಿಗಳೀರೂಪಿನೊಳ್
ತಿಳಿಯಲ್ಕಿಲ್ಲದೊಡಾಕೆಗಳ್ತಿಗೆ ತಾನಿಂತಪ್ಪ ರೂಪಿಂದಮೇಂ
ತಳೆಯಲ್ವೇಳ್ಕುಮೆ ದೇಹಮಂ ನೃಪಶುವಾಕಾರಂಗಳಿಂದಕ್ಕಟಾ(ಪುಟ 224)

ಹೊಸಗನ್ನಡಕ್ಕೆ **ಉದಾಹರಣೆ:-**
ಸುಚರಿತೆ ಜನಕ ಸುತೆಯ ನೋಡುವ ನಾವು॥
\- - - - - - - - - - - - - -
ನಿರುಕಿಸಲವಳದು ತವಕಿಪೆ ಸಚಿವನೆ॥ (ಪುಟ-225)

ಸಂಭಾಷಣೆಯಲ್ಲಿ ಸಮಾಸಪದಗಳು ವಿಶಿಷ್ಟ ಸ್ಥಾನ ಪಡೆದಿವೆ. ಹಾಗೆಯೇ ವೃತ್ತಗಳಲ್ಲಿ ಸಂಸ್ಕೃತದ ದೀರ್ಘಸಮಾಸದ ಪದಗಳನ್ನು ಕೂಡ ಬಳಸಿರುವುದು ಕಂಡುಬರುತ್ತದೆ.

ಅದು ಹೀಗಿದೆ-

ಇದು ಕೇಳೀ ಧರಣೀಧರಂ ಕನಕರಂಭಾವೇಷ್ಟಿತಪ್ರಾಂತಮಿಂ।
ತಿದು ತಿರೋನ್ಮಿಷದಂಬುಜಾತವಿತತಾಂಚದ್ವಾಪಿನೀಪೂರಮಿಂ।
ತಿದು ಚೈತ್ರೋದ್ವಿಕಸನ್ಮನೋಜ್ಞಕಳಿಕಾಮಾಧುರ್ಯಮಾಕಂದಕಂ।
ಜದೆ ಗುಂಜದ್ಭ್ರಮರಾವಳೀನಿನದಝುಂಕಾರಂ ಕರಂ ತೋರುಗಂ।(ಪುಟ-250)

ಶ್ರೀಕಂಠೇಶಗೌಡರು ಚಂಪೂಕವಿಗಳಂತೆ ಇತರೆ ನಾಟಕಗಳಲ್ಲಿ ಬಳಸಿರುವಂತೆ ಇಲ್ಲಿಯೂ ಹೆಚ್ಚಾಗಿ ಕಂದಪದ್ಯಗಳನ್ನು ರಚಿಸಿದ್ದಾರೆ. ಇವು ಬಹುತೇಕ ಆದಿಪ್ರಾಸಗಳಿಂದ ಕೂಡಿವೆ. ಹೆಚ್ಚು ಸಂಸ್ಕೃತಭೂಯಿಷ್ಠ ಪದ್ಯಗಳನ್ನು ಬರೆದಿದ್ದಾರೆ.

**ಉದಾಹರಣೆಗೆ:–** ಸೀತೆಜಗತ್ತ್ರಯರಮಣೀ।
ಖ್ಯಾತೆಗುಣವ್ರಾತಸಹಿತೆ ಸುರುಚಿರಚರಿತೇ॥
ಪೂತೆ ಸಲೆ ಭಾಗ್ಯಭವನೀ।
ಭೂತೆ ಬುಧಪ್ರೀತೆ ಜನಕಜನಪತಿಜಾತೇ॥(ಪುಟ.216)

ಪ್ರತಾಪರುದ್ರದೇವದಲ್ಲಿ ಹೆಚ್ಚಾಗಿ ಬಳಸಿಕೊಂಡಿರುವ ಕಂದಪದ್ಯಗಳನ್ನು ಇಲ್ಲಿ ಮಿತಿಗೊಳಿಸಿಕೊಂಡಿರುವುದು ಅವರ ಪದ್ಯರಚನೆಯಲ್ಲಿ ಔಚಿತ್ಯ ಇರುವುದು ಕಂಡುಬರುತ್ತದೆ. ಇಲ್ಲಿ ಕೇವಲ **28** ಕಂದಪದ್ಯಗಳನ್ನು ಬಳಸಿಕೊಂಡಿದ್ದಾರೆ.

### (ಇ) ಗೇಯಗೀತೆಗಳು

ಪ್ರೇಕ್ಷಕರನ್ನು ಸೆರೆಹಿಡಿದು ಕೂಡಿಸಲು ಮತ್ತು ಅಭಿಪ್ರಾಯಗಳನ್ನು ಭಾವಪೂರ್ಣವಾಗಿ ನಿರೂಪಿಸಲು ಗೇಯಗೀತೆಗಳು ಹೆಚ್ಚು ಸಹಕಾರಿಯಾಗುತ್ತವೆ. ಶಾಸ್ತ್ರೀಯ ಸಂಗೀತದ ರಾಗ–ತಾಳಗಳ ಹಾಡುಗಳನಷ್ಟೇ ಅಲ್ಲದೆ, ಅವರ ಕಾಲದ ಜನಪ್ರಿಯ ತೆಲುಗು ಹಿಂದುಸ್ತಾನಿ ಮಟ್ಟುಗಳಲ್ಲೂ ಹಾಡುಗಳನ್ನು ರಚಿಸಿದ್ದಾರೆ. ಶಾಸ್ತ್ರೀಯ ಹಾಡುಗಳಲ್ಲಿ ಝಂಪೆತಾಳ, ಏಕತಾಳ, ಮಟ್ಟತಾಳಗಳನ್ನು ಬಳಸಿಕೊಂಡು, ಬೇಹಾಗ್, ಹಿಂದುಸ್ತಾನಿ ಮುಖಾರಿ, ದೇಶಿತೋಡಿ, ಕೇದಾರ, ಹಿಂದುಸ್ತಾನಿ ಭೈರವಿ, ಕಮಾಚು, ಆಠಾಣ, ನೀಲಾಂಬರಿ, ಖರಹರಪ್ರಿಯ, ಪೀಲು, ಕಲ್ಯಾಣಿ, ತೋಡಿ, ಜುಂಜೋಟಿ, ಮಧ್ಯಮಾವತಿ, ಸುರಟಿ, ಶಂಕರಾಭರಣ, ನೋಟು ಮೊದಲಾದ ರಾಗಗಳಲ್ಲಿ **29** ಹಾಡುಗಳನ್ನು ರಚಿಸಿದ್ದಾರೆ.

ಇಲ್ಲಿಯ ಹಲವು ಹಾಡುಗಳು ಅಚ್ಚಕನ್ನಡ ಬಳಕೆ ಅಧಿಕವಾಗಿರುವ ರಚನೆಗಳಾಗಿವೆ. ಇಲ್ಲಿ ಅವರ ಸಂಗೀತ ಜ್ಞಾನವನ್ನು ಗುರ್ತಿಸಬಹುದು.

**ಉದಾಹರಣೆ:-**

ಮೋಡವ ಮುಟ್ಟುವ। ಚಾಡಿನ ಬಣಜೆಯು। ನೌಡೊಳಗಿಕ್ಕುವ ತಾಟಕೆಯುಂ॥
ಕತ್ತಿಯ ಝುಳಪಿಸಿ। ಕತ್ತುತ ಖಂಡಿಸಿ। ನೆತ್ತಿಯ ನೆತ್ತರ ಹೀರುವೆನಾಂ॥
ಕತ್ತಿಗೆ ಕರುಳನು। ಮುತ್ತಿನ ಸರದೊಲು। ಸುತ್ತುವೆನಾಂ ಭಲ ತಾಟಕೆಯು॥ (ಪುಟ-222)

ರಾಮ-ಪರಶುರಾಮರ ಸಂಭಾಷಣೆಯು ಗಾನ ಸಂವಾದ ಶೈಲಿ ಹಿನ್ನೆಲೆಯಲ್ಲಿ ಗಮನ ಸಳೆಯುತ್ತದೆ. ಅದು ಹೀಗಿದೆ.

ಫಡ ಫಡೆಲವೊ ಹುಡುಗ ನೀನು ಧುರಕೆ ಕರೆವೆಯಾ। ಮೃಡನ
ಶಿಷ್ಯನಾದ ನನ್ನ ಕೆಣಕಬಲ್ಲೆಯಾ। ಪು-ರಾ-ರಿ ಧನುವನು।
ಮುರಿದೆನೆಂಬಗರ್ವವನ್ನು ತೋರಬಂದೆಯಾ॥
ಮೃಡನ ಶಿಷ್ಯ ತೋರ ಬಾರೊ ನಿನ್ನ ಶೌರ್ಯವ।
ನುಡಿಯಬಿಡುತ ಮಾಡು ನನ್ನೊಳಗೆ ಯುದ್ಧವ। ಪೊ-ಡ-ವಿ ಪಾಲರ।
ಒಡಲಕಡಿದ ನಿನ್ನ ಕೊಡಲಿ ತೆಗೆಯೊ ನೋಡುವ॥ (ಪುಟ-280)

ಜಾನಪದದಲ್ಲಿ ಆಸಕ್ತಿಯಿದ್ದ ಶ್ರೀಕಂಠೇಶಗೌಡರು ಈ ನಾಟಕದಲ್ಲಿ **2** ಲಾವಣಿಗಳನ್ನು ಬಳಸಿರುವುದು ಗಮನಾರ್ಹ ಸಂಗತಿ. **ಉದಾಹರಣೆ:-**

ಶಾಮಸುಂದರಾಂಗನಾದ ರಾಮನನ್ನು ವರಿಸಿಕೊಂಡು।
ಕಾಮತಾಪವನ್ನು ಕಳೆವೆನಿನ್ನು ನಾನು॥ಪ॥
ಮುಸುಕಿದ ಮರೆಯೊಳು। ಪಿಸಿಪಿಸಿ ಮಾತನಾಡಿ। ಹಸಿನಗು ನಗುತಿರ್ಪೆ
ನಾನಹಹ॥೧॥ ಬಗೆಬಗೆಯಿಂದ ನಾನು। ಬಿಗಿದಪ್ಪಿಕೊಂಡು। ಆಗ
ಭೋಗಪಡುತಿರ್ಪೆನೀಗ ಪೋಗಿ॥೨॥ ಚಿತ್ತಜನ ಕೇಳಿಯಲ್ಲಿ।
ಕತ್ತು ಸುತ್ತಿಕೊಂಡು ನಾನು। ಒತ್ತುತೆದೆಯ ಮುತ್ತನೀವೆ ಮತ್ತೆಮತ್ತೆ॥೩॥

ನೀಚಪಾತ್ರಗಳು ಬಂದಾಗ ಗ್ರಾಮ್ಯ ಭಾಷೆಯ ಪ್ರಯೋಗವಿದೆ. **ಉದಾಹರಣೆ:-** ಮೊಂಡುಮೂಗಿನ ಮಾರಿಯಾದೆ। ಮೂಳಿಯಾದೆ। ಮೋಟುಕಿವಿಯ ರಂಡೆಯಾದೆ॥ ಪುಟ(292) ಉತ್ತಮ ಪಾತ್ರಗಳು ಬಂದಾಗ ಶಿಷ್ಟ ಭಾಷೆ ಬಳಸಿದ್ದಾರೆ. ಧರಣಿಜೆ ಈ ಪರಿಯೊಳು ಪೋಪಳೆಹಾಹಾ॥ ಸುದತಿಜಾನಕೀಯು ತನ್ನಮುದವನು ತೋರುತೆನ್ನ ಹೃದಯವ ಸೆಳೆದಳಿವಳೆ ಈ। ಹದನದಿಂದೆನ್ನ ಮುನ್ನ॥೧॥

ಸೀತಾಸ್ವಯಂವರ ನಾಟಕ ಕನ್ನಡದಲ್ಲಿ ರಾಮಾಯಣದ ವಸ್ತುಗಳನ್ನು ಒಳಗೊಂಡ ನಾಟಕಗಳಲ್ಲಿ ಒಂದಾಗಿದೆ. ಆದರೆ ಸಂಸ್ಕೃತದಲ್ಲಿ ಪ್ರಸಿದ್ಧವಲ್ಲದ ನಾಟಕಗಳಲ್ಲಿ ಒಂದಾದ ಈ ನಾಟಕ ಬಹುಹಿಂದೆಯೇ ಕನ್ನಡಕ್ಕೆ ಬಂದಿದ್ದರೂ ಯಾರೂ ಗಮನಿಸಿರಲಿಲ್ಲ. ಅದನ್ನು ಶ್ರೀಕಂಠೇಶಗೌಡರು ಕಂಪೆನಿ ನಾಟಕವಾಗಿ ಅಳವಡಿಸಲೆತ್ನಿಸಿ ಯಶಸ್ವಿಯಾಗಿದ್ದಾರೆ. ಸೀತಾಸ್ವಯಂವರ ನಾಟಕಕ್ಕೆ ಆಧಾರವಾದ ಜಾನಕೀ ಪರಿಣಯವನ್ನು ಕುರಿತು ಎ.ಆರ್. ಕೃಷ್ಣಶಾಸ್ತ್ರಿಗಳು ಹೇಳಿದ ಮಾತುಗಳು ಶ್ರೀಕಂಠೇಶಗೌಡರ ನಾಟಕಕ್ಕೂ ಅನ್ವಯಿಸುತ್ತದೆ.

17ನೇ.ಶತಮಾನದ ಕೊನೆಯಲ್ಲಿದ್ದ ರಾಮಭದ್ರ ದೀಕ್ಷಿತನು ರಚಿಸಿದ 7ಅಂಕಗಳ ನಾಟಕದಲ್ಲಿ ಮಿಕ್ಕ ರಾಮಾಯಣ ನಾಟಕಗಳಲ್ಲಿ ಇಲ್ಲದ ಒಂದೆರಡು ಗುಣಗಳು ಇದರಲ್ಲಿವೆ. ಇಲ್ಲಿರುವ ಪದ್ಯಗಳು ಸ್ವಲ್ಪ ಹೆಚ್ಚಾಗಿಯೇ ಇದ್ದರೂ ಅವು ಸಾಧಾರಣವಾಗಿ ಸಣ್ಣ ವೃತ್ತಗಳು ಭಾಷೆ ಸುಗಮವಾಗಿವೆ. ಮಾತುಗಳು ಉದ್ದವಿಲ್ಲ. ಕವಿ ತನ್ನ ಹಿಂದಿದ್ದ ರಾಮಾಯಣ ನಾಟಕಕಾರರು ತೋರಿಸಿರುವ ಸಂವಿಧಾನ ಚಮತ್ಕಾರಗಳೆಲ್ಲವನ್ನು ತೋರಿಸಿ ಅದನ್ನು ಮೀರಿಸಬೇಕೆಂದು ಸಂಕಲ್ಪಿಸಿದಂತಿದೆ.

ಅನುವಾದದಲ್ಲಿ ಶ್ರೀಕಂಠೇಶಗೌಡರು, ಸಂವಿಧಾನ ಚಮತ್ಕಾರ ತೋರಿಸಿರುವುದು ಸ್ಪಷ್ಟವಾಗಿದೆ. ಶ್ರೀಕಂಠೇಶಗೌಡರು ಇಂಗ್ಲಿಷ್ ನಾಟಕಗಳನ್ನು ಕನ್ನಡದ ರಂಗಭೂಮಿಗೆ ಅಳವಡಿಸುವಲ್ಲಿ ಯಶಸ್ವಿಗಳಾದಂತೆಯೇ ಸಂಸ್ಕೃತದ ರಾಮಾಯಣದ ನಾಟಕವನ್ನು ಅಳವಡಿಸಿರುವುದರಲ್ಲಿ ಯಶಸ್ವಿಗಳಾಗಿದ್ದಾರೆ ಎಂಬುದಕ್ಕೆ ಈ ನಾಟಕ ಸಾಕ್ಷಿಯಾಗಿದೆ.

---

# ಅಧ್ಯಾಯ–8

# ಸಮಾರೋಪ

ಕನ್ನಡದಲ್ಲಿ ನಾಟಕ ಸಾಹಿತ್ಯವನ್ನು ಕುರಿತು ನಡೆದ ಚರ್ಚೆಗಿಂತಲೂ ರಂಗಮಂಟಪ; ರಂಗಾಭಿನಯ, ರಂಗನಾಟಕಗಳು, ನಟನಾಸಾಮರ್ಥ್ಯ, ಕಂಪನಿಗಳ ಇತಿಹಾಸ, ನಟನೆ ಜೀವನ ಚರಿತ್ರೆ, ನಾಟಕದ ಗೀತೆಗಳು ಇತ್ಯಾದಿ ವಿಷಯಗಳ ಬಗ್ಗೆ ವಿಚಾರಗೋಷ್ಠಿಗಳು ನಡೆದಿವೆ. ಪತ್ರಿಕಾಲೇಖನಗಳು ಬಂದಿವೆ. ಪುಸ್ತಕಗಳು ಬಂದಿವೆ. ಈ ಹಿನ್ನೆಲೆಯಲ್ಲಿ ಅನ್ಯಭಾಷಾ ಸಾಹಿತ್ಯ ಕನ್ನಡಕ್ಕೆ ಬರೆದಿರುವುದರ ಬಗ್ಗೆ ಚರ್ಚೆ ಅಧ್ಯಯನಗಳು ನಡೆದಿರುವುದು ಅತಿ ಕಡಿಮೆ. ನಮ್ಮ ನೆರೆ ಹೊರೆಯ ಭಾಷಾ ಸಂಸ್ಕೃತಿಗಳ ಬಗ್ಗೆ ತೆಲುಗು, ತೆಮಿಳು, ಮಲೆಯಾಳಂ, ನಾಟಕ ಸಾಹಿತ್ಯದ ಬಗ್ಗೆ ಅಧ್ಯಯನ ಅತಿ ವಿರಳ. ಹಿಂದಿ, ಮರಾಠ, ಇಂಗ್ಲಿಷ್ ನಾಟಕಗಳ ಬಗ್ಗೆ ಇತ್ತೀಚೆಗೆ ವಿಮರ್ಶೆಗಳು, ಅನುವಾದಗಳು, ರಂಗಪ್ರದರ್ಶನಗಳು ಕಾಣಿಸಿಕೊಂಡಿವೆ. ಷೇಕ್ಸ್‌ಪಿಯರನ ನಾಟಕಗಳ ಅನುವಾದಗಳು ನಮ್ಮಲ್ಲಿ ಸಾಗಿ ಬಂದಿವೆ ಹೊರತು, ಷೇಕ್ಸ್‌ಪಿಯರ್ ನಾಟಕಗಳ(ರೂಪಾಂತರಿತ/ಅಧಾರಿತ/ಅನುವಾದಿತ ನಾಟಕಗಳ) ಪ್ರದರ್ಶನಗಳು 20ನೇ ಶತಮಾನದ ಸ್ವಾತಂತ್ರ್ಯಪೂರ್ವದಲ್ಲಿದ್ದಂತೆ ಪ್ರಭಾವಶಾಲಿಯಾಗಿ ಕಂಪನಿ ನಾಟಕಗಳು ಕಾಣಿಸಲಿಲ್ಲ. ಒಂದೆಡೆ ಕಂಪನಿನಾಟಕಗಳು ಕ್ಷೀಣಿಸುತ್ತಾ ಬಂದವು. ಸಾಮಾಜಿಕ ನಾಟಕಗಳ ಒಲವು ಹೆಚ್ಚಾಗಿ ಐತಿಹಾಸಿಕ ಪೌರಾಣಿಕ ನಾಟಕಗಳಂತೆ ಅನುವಾದಿತ ನಾಟಕಗಳು ಕಡಿಮೆ ಆಗುತ್ತಾ ಬಂದವು. ಈಚೆಗೆ ಅಂದರೆ 20ನೇ ಶತಮಾನದ ಕೊನೆಯ ಹೊತ್ತಿಗೆ ಅನ್ಯಭಾಷಾ ನಾಟಕಗಳ ಅನುವಾದ ಪ್ರದರ್ಶನಗಳು ಹೆಚ್ಚತೊಡಗಿದವು . ಅದರೆ ಷೇಕ್ಸ್‌ಪಿಯರ್ ನಾಟಕಗಳು ವಿಶೇಷವಾಗಿ ರಂಗಮಂಟಪದ ಮೇಲೆ ಬರಲಿಲ್ಲ. ಅಲ್ಲೊಂದು ಇಲ್ಲೊಂದು ಕಾಣಿಸತೊಡಗಿತು. ಈಚೆಗೆ ಅಮೆಚೂರ್ ನಾಟಕಕಾರರಿಂದ ಷೇಕ್ಸಪಿಯರ್ ಅನುವಾದಗಳು ಕಾಣಿಸಿಕೊಳ್ಳುತ್ತಿವೆ. ಆದರೆ ಸಮೃದ್ಧಿಯಾಗಿ ವೈವಿಧ್ಯಮಯವಾಗಿ ಷೇಕ್ಸ್‌ಪಿಯರ್ ರಂಗಾಭಿನಯ ನಾಟಕಗಳು ಕನ್ನಡಕ್ಕೆ ಬರಲಿಲ್ಲ.

ಈ ಹಿನ್ನೆಲೆಯಲ್ಲಿ ಷೇಕ್ಸ್‌ಪಿಯರ್ ನಾಟಕಗಳ ಕನ್ನಡಾನುವಾದಗಳನ್ನು ರಂಗಪ್ರದರ್ಶನಗಳನ್ನು ಕುರಿತು ಈ ಸಂಪ್ರಬಂಧದಲ್ಲಿ ವಿವೇಚಿಸಿದೆ. ಷೇಕ್ಸ್‌ಪಿಯರ್ ನಾಟಕಗಳನ್ನು ಕಂಪನಿಯವರು ಅಭಿನಯಿಸುವುದಂತೂ ನಿಂತೆ ಹೋಗಿದೆ. ಇಂದು ಹವ್ಯಾಸಿ ಕಲಾವಿದರ ಪಾಲಾಗಿದೆ. ಹಿಂದೆ ಕಂಪನಿ ನಾಟಕವಾಗಿ ಷೇಕ್ಸ್‌ಪಿಯರ್ ನಾಟಕ ಹೇಗೆ ಕಾಣಿಸಿಕೊಂಡಿತು ಎಂಬುದರ ಪ್ರತೀಕವಾಗಿ ಶ್ರೀಕಂಠೇಶಗೌಡರ ಎರಡು ಪ್ರಮುಖ ಇಂಗ್ಲಿಷ್ ನಾಟಕಗಳ ಅನುವಾದವನ್ನು ವಿಸ್ತಾರವಾಗಿ ಚರ್ಚೆ ಮಾಡಿದೆ. ಷೇಕ್ಸ್‌ಪಿಯರ್ ನಾಟಕಗಳನ್ನು ಕನ್ನಡಕ್ಕೆ ತಂದವರಲ್ಲಿ 19–20ನೇ ಶತಮಾನದ ಪ್ರಾರಂಭಿಕರಲ್ಲಿ

ಶ್ರೀಕಂಠೇಶಗೌಡರು ಪ್ರಮುಖರು. ಆನಂದರಾವ್, ಕೆರೂರುವಾಸುದೇವಾಚಾರ್ಯ, ಬಸವಪ್ಪಶಾಸ್ತ್ರಿ, ಮೊದಲಾದವರ ಷೇಕ್ಸ್‌ಪಿಯರ್ ಅನುವಾದಗಳು ಪ್ರಮುಖವಾದವು. ಇವರುಗಳ ಅನುವಾದ-ರಂಗಪ್ರದರ್ಶನದ ಹಿನ್ನೆಲೆಯಲ್ಲಿ ಶ್ರೀಕಂಠೇಶಗೌಡರ ಮ್ಯಾಕ್ಬೆತ್, ಎ ಮಿಡ್ ಸಮ್ಮರ್ ನೈಟ್ಸ್ ಡ್ರೀಮ್ ನಾಟಕಗಳನ್ನು ಪರಿಶೀಲಿಸಿದೆ.

ಕೇವಲ ನಾಟಕಕಾರರಷ್ಟೇ ಅಲ್ಲದೆ ಸಾಹಿತಿ, ಪತ್ರಿಕಾಕರ್ತ, ವಕೀಲ, ಪ್ರಕಾಶಕ, ಜೀವನ ಚರಿತ್ರಕಾರ, ಜಾನಪದ ಸಾಹಿತಿ, ಕವಿ ಆದ ಶ್ರೀಕಂಠೇಶಗೌಡರ ವೈವಿಧ್ಯಮಯ ಜೀವನ ಚಿತ್ರವನ್ನು ವಿವರವಾಗಿ ನೀಡಲಾಗಿದೆ. ನಾಟಕಕಾರರೊಬ್ಬನ ಜೀವನ ಚರಿತ್ರೆ ಕನ್ನಡ ಸಾಹಿತ್ಯ ಚರಿತ್ರೆ ದೃಷ್ಟಿಯಲ್ಲಿ ಮಹತ್ವ ಪಡೆಯುವುದು ಅಪರೂಪ. ಇಂಥ ಅಪರೂಪದ ವ್ಯಕ್ತಿ ಶ್ರೀಕಂಠೇಶಗೌಡರು ಎಂಬುದನ್ನು ಇಲ್ಲಿ ಎತ್ತಿ ಹಿಡಿಯಲಾಗಿದೆ.

ಶ್ರೀಕಂಠೇಶಗೌಡರ ಇಂಗ್ಲಿಷ್ ನಾಟಕಾನುವಾದಗಳಲ್ಲಿ ರೂಪಾಂತರಗೊಂಡ ಕಥಾವಸ್ತು ಮತ್ತು ಮೂಲಕಥಾವಸ್ತು ಎರಡನ್ನು ಸಮಸಮವಾಗಿ ಕಾಣಿಸಿ ಆ ನಾಟಕಗಳ ಪಾತ್ರ ಚಿತ್ರಣ, ಭಾಷಾಶೈಲಿಗಳನ್ನು ವಿವರಿಸಲಾಗಿದೆ.

ರಾಮಾಯಣದ ನಾಟಕಗಳು ಕನ್ನಡದಲ್ಲಿ ವಿಶೇಷವಾಗಿವೆ, ಮತ್ತು ಅಧಿಕವಾಗಿವೆ. ಸಂಸ್ಕೃತದ ನಾಟಕಗಳು ಕನ್ನಡಕ್ಕೆ ಬಂದಷ್ಟು ಇತರ ಭಾಷೆಗಳ ನಾಟಕಗಳು ಬಂದಿಲ್ಲ. ಸಂಸ್ಕೃತದಲ್ಲಿ ಪ್ರಸಿದ್ಧ ನಾಟಕಗಾರರ ನಾಟಕಗಳೆಲ್ಲ ಕನ್ನಡಕ್ಕೆ ಸಮಗ್ರವಾಗಿ ಬಂದಿವೆ.

ಭಾಸನ ನಾಟಕಗಳು, ಭವಭೂತಿ, ಹರ್ಷ, ಕಾಳಿದಾಸರ ನಾಟಕಗಳು ಎಲ್ಲವೂ ಕನ್ನಡಕ್ಕೆ ಅನುವಾದವಾಗಿವೆ. ಪ್ರದರ್ಶಿತವಾಗಿವೆ. ಒಬ್ಬ ಕವಿಯ ನಾಟಕವನ್ನೇ ಹಲವಾರು ಮಂದಿ ಅನುವಾದಿಸಿದ್ದಾರೆ. ಉದಾಹರಣೆಗೆ:- ಕಾಳಿದಾಸನ ಶಾಕುಂತಲವನ್ನು ಚುರಮುರಿ, ಬಸವಪ್ಪಶಾಸ್ತ್ರಿ, ಕೆ. ಕೃಷ್ಣಮೂರ್ತಿ, ಮುಂತಾದವರು ಅನುವಾದಿಸಿದ್ದಾರೆ. ಆದರೆ ಸಂಸ್ಕೃತದ ಅಪ್ರಸಿದ್ಧ ಕವಿಗಳ ಆದರೆ ಪ್ರತಿಭಾವಂತರ ಸಂಸ್ಕೃತದ ನಾಟಕಗಳು ಬಹುತೇಕ ಕನ್ನಡಕ್ಕೆ ಬಂದಿಲ್ಲ. ಈ ದೃಷ್ಟಿಯಲ್ಲಿ ಶ್ರೀಕಂಠೇಶಗೌಡರು ಅನುವಾದಿಸಿರುವ ಸೀತಾಸ್ವಯಂವರ ನಾಟಕ ಮಹತ್ವಪೂರ್ಣವಾದುದು.

ಸುಮಾರು 17ನೇ ಶತಮಾನದ ಕೊನೆಯಲ್ಲಿದ್ದ ರಾಮಭದ್ರದೀಕ್ಷಿತನ 7 ಅಂಕಣಗಳ ಜಾನಕೀಪರಿಣಯ ನಾಟಕ ಶ್ರೀಕಂಠೇಶಗೌಡರ ಕಾಲಕ್ಕೆ ಅನುವಾದವಾಗಿತ್ತು. ಶ್ರೀಕಂಠೇಶಗೌಡರು ಓದಿ ಪ್ರಭಾವಿತರಾದರು. ಇದನ್ನು ಆಧರಿಸಿ ಸೀತಾಸ್ವಯಂವರವೆಂಬ ನಾಟಕ ರಚಿಸಿದ್ದಾರೆ. ಯಥಾವತ್ತಾದ ಅನುವಾದ ಮಾಡಿಲ್ಲ. ಜಾನಕೀ ಪರಿಣಯವೆಂಬ ಸಂಸ್ಕೃತ ನಾಟಕಕ್ಕೂ ಇದಕ್ಕೂ ಅನೇಕ ವ್ಯತ್ಯಾಸಗಳಿವೆ ಎಂದು ಹೇಳಿದ್ದಾರೆ".[1] ಕೇವಲ

ಕಥಾ ವಸ್ತುವಿಗಾಗಿ ಅದನ್ನು ಆಧರಿಸಿದ್ದಾರೆ ಎನ್ನಬಹುದು. ಈ ನಾಟಕ ರಂಗಮಂದಿರದ ಮೇಲೆ ಯಶಸ್ವಿಯಾಗಿ ಅನೇಕ ಬಾರಿ ಪ್ರದರ್ಶಿತವಾಗಿದೆ ಎಂಬುದನ್ನು ಗಮನಿಸಬೇಕು "ಶ್ರೀಕಂಠೇಶಗೌಡರೇ ಇದನ್ನು ಅನೇಕ ವೇಳೆ ಆಡಿ ಪಂಡಿತ ಪಾಮರರಿಗೆ ಸಂತೋಷವನ್ನುಂಟುಮಾಡಿದೆ. ಎಂದು ಹೇಳಿಕೊಂಡಿದ್ದಾರೆ".[2] ಸ್ವತಃ ನಟರೂ ನಾಟಕಕಾರರಾದ ಶ್ರೀಕಂಠೇಶಗೌಡರು ಶ್ರೀಕಂಠೇಶ್ವರ ನಾಟಕ ಮಂಡಲಿಯನ್ನು ಕಟ್ಟಿದ್ದರು ಎಂಬುದನ್ನು ಗಮನಿಸಬೇಕು. ಮೂಲ ಸಂಸ್ಕೃತ ನಾಟಕ ಲಭ್ಯವಾಗದ ಕಾರಣ ಅನುವಾದಿತ ಕೃತಿಯನ್ನು ಆಧರಿಸಿ ಕಥಾವಸ್ತು, ಪಾತ್ರಚಿತ್ರಣ, ಭಾಷಾಶೈಲಿಗಳನ್ನು ಕುರಿತು ವಿವರವಾಗಿ ಚರ್ಚೆಮಾಡಿರುವುದು ಕನ್ನಡದಲ್ಲಿ ಇದೇ ಮೊದಲು. ಕನ್ನಡದ ನಾಟಕ ಸಾಹಿತ್ಯಚರಿತ್ರೆ ಬರೆದವರು ನಾಟಕಗಳ ವಿಮರ್ಶೆ ಮಾಡಿದವರೂ ಇದರ ಪ್ರಸ್ತಾಪ ಮಾಡಿದ್ದರೂ ವಿಮರ್ಶೆ ವಿಚಾರ ಮಾಡಿಲ್ಲ. ಎ. ಆರ್. ಕೃ. ಒಬ್ಬರು ಇದರ ಕಥಾಸಾರ ನೀಡಿ, ನಾಲ್ಕು ಮಾತನ್ನು ಸಂಗ್ರಹವಾಗಿ ಹೇಳಿದ್ದಾರೆ ಅಷ್ಟೇ. ಉಳಿದವರಾರೂ ಇದರ ಗೋಜಿಗೆ ಹೋದಂತೆ ಕಂಡುಬರುವುದಿಲ್ಲ. ಇನ್ನು ಕನ್ನಡಕ್ಕೆ ಅನುವಾದಿಸಿದ ಒಂದಿಬ್ಬರು ಸಹ ಈ ಬಗ್ಗೆ ತಮ್ಮ ಪೀಠಿಕೆಯಲ್ಲಿ ವಿಶೇಷವಾಗಿ ಚರ್ಚಿಸಿಲ್ಲ.

ಶ್ರೀಕಂಠೇಶಗೌಡರ ಪ್ರಧಾನ ನಾಟಕತ್ರಯಗಳು ಕನ್ನಡಕ್ಕೆ ಅಪೂರ್ವಕೊಡುಗೆಗಳಾಗಿದ್ದು ಇದುವರೆಗೂ ಸಮಗ್ರವಾಗಿ ಆ ಬಗ್ಗೆ ಮೊದಲ ಬಾರಿಗೆ ವಿವರವಾಗಿ ಈ ಸಂಪ್ರಬಂಧದಲ್ಲಿ ಚರ್ಚಿಸಲಾಗಿದೆ. ಕನ್ನಡ ನಾಟಕಗಳಲ್ಲಿ ಷೇಕ್ಸ್‌ಪಿಯರ್ ನಾಟಕಗಳ ಅನುವಾದದ ಹಿನ್ನೆಲೆಯಲ್ಲಿ ಎರಡು ನಾಟಕಗಳನ್ನು ಮತ್ತು ಸಂಸ್ಕೃತ ಮೂಲವನ್ನು ಆಧರಿಸಿದ ಒಂದು ರಾಮಾಯಣದ ನಾಟಕವನ್ನು ಇಲ್ಲಿ ವಿಮರ್ಶಿಸಲಾಗಿದೆ. ಶ್ರೀಕಂಠೇಶಗೌಡರ ಜೀವನ ಸಾಧನೆ ಸಾಹಿತ್ಯಗಳನ್ನು ಸಾಕಷ್ಟು ಸಮಗ್ರವಾಗಿ ಚಿತ್ರಿಸಲಾಗಿದೆ. ಹೀಗೆ ಕನ್ನಡದಲ್ಲಿ ಮೊದಲ ಬಾರಿಗೆ ಶ್ರೀಕಂಠೇಶಗೌಡರ ನಾಟಕತ್ರಯವನ್ನು ಪ್ರತ್ಯೇಕವಾಗಿ ಮತ್ತು ವಿಸ್ತೃತವಾಗಿ ಈ ಸಂಪ್ರಬಂಧದಲ್ಲಿ ಅವರ ಕಾಲದ ನಾಟಕಗಳ ಹಿನ್ನೆಲೆಯಲ್ಲಿ ಮತ್ತು ಅವರ ಬದುಕು ಸಾಹಿತ್ಯ ಸಾಧನೆಯ ಹಿನ್ನೆಲೆಯಲ್ಲಿ ವಿಮರ್ಶಿಸಲಾಗಿದೆ.

---

# ಅನುಬಂಧಗಳು

## ಅನುಬಂಧ-1

## ಜಾನಕೀಪರಿಣಯ ಕಥಾಸಾರ

ಸುಮಾರು ಹದಿನೇಳನೆಯ ಶತಮಾನದ ಕೊನೆಯಲ್ಲಿದ್ದ ರಾಮಭದ್ರ ದೀಕ್ಷಿತನು ಏಳು ಅಂಕದ ಒಂದು "ಜಾನಕೀಪರಿಣಯ ನಾಟಕ" ವನ್ನು ಬರೆದಿದ್ದಾನೆ. ಹೆಸರು "ಜಾನಕೀಪರಿಣಯ" ವೆಂದಿದ್ದರೂ ಇದರಲ್ಲಿ ರಾಮನು ಅಯೋಧ್ಯೆಗೆ ಹಿಂತಿರುಗಿ ಪಟ್ಟಾಭಿಷಿಕ್ತನಾಗುವವರೆಗಿನ ಕಥೆ ಎಲ್ಲವೂ ಇದೆ. ಇದರಲ್ಲಿ ಕವಿ ತನ್ನ ಹಿಂದಿದ್ದ ರಾಮಾಯಣ ನಾಟಕಕರ್ತರು ತೋರಿಸಿರುವ ಸಂವಿಧಾನ "ಚಮತ್ಕಾರ"ಗಳೆಲ್ಲವನ್ನೂ ತೋರಿಸಿ ಅವರನ್ನು ಮೀರಿಸಬೇಕೆಂದು ಸಂಕಲ್ಪಿಸಿದಂತಿದೆ-

ವಿದ್ಯುಜ್ಜಿಹ್ವ ರಾವಣ ಸಾರಣರು ಕ್ರಮವಾಗಿ ವಿಶ್ವಾಮಿತ್ರ ರಾಮ ಲಕ್ಷ್ಮಣರ ರೂಪನ್ನು ತಳೆದು ಜನಕನಿಗೆ ಮೋಸಮಾಡಿ ಸೀತೆಯನ್ನು ಪಡೆದುಕೊಂಡು ಹೋಗಬೇಕೆಂದು ಮಿಥಿಲೆಗೆ ಬರುತ್ತಾರೆ. ಅತ್ತ ಮಾರೀಚ ಕರಾಳರು ಕಾಶ್ಯಪ ಪಿಂಗಳರ ವೇಷಧರಿಸಿ ರಾಮನಿಗೆ ಮಾಯಾಸೀತೆಯನ್ನು ತೋರಿಸಿ ಅವಳು ರಾಮನ ವಿರಹದಿಂದ ಅಗ್ನಿಪ್ರವೇಶ ಮಾಡಲು ರಾಮನೂ ಅವಳ ಹಿಂದೆ ಬೆಂಕಿಗೆ ಬೀಳುವಂತೆ ಪ್ರೇರಿಸುವರು. ಅವನೂ ಬೀಳಬೇಕೆಂದು ಪಕ್ಕದಲ್ಲಿದ್ದ ಒಂದು ಬಂಡೆಯ ಮೇಲೆ ಹತ್ತಲು ಅದು ಅಹಲ್ಯೆಯಾಗುವುದು; ರಾವಣನ ಮೋಸ ನಡೆಯುವುದಕ್ಕೆ ಅಡ್ಡಿಯಾಗಿ ಒಬ್ಬ ಗಂಧರ್ವನು ಅವರ ಮಾಯೆಯನ್ನು ತಿಳಿಸುವನು ಈ ಮಧ್ಯೆ ರಾಮಾದಿಗಳು ಬಂದು, ಧನುರ್ಭಂಗ ಪೂರ್ವಕವಾಗಿ ವಿವಾಹ ನಡೆದು ಹೋಗುವುದು. ರಾವಣನು ನೆವದಿಂದ ನುಸುಳಿ ಅದೃಶ್ಯನಾಗಿ ನೋಡುತ್ತಿದ್ದ ಕೊನೆಗೆ ಸೀತೆಯನ್ನು "ಬಲ"ದಿಂದ ಹಿಡಿದುಕೊಂಡು ಹೋಗಬೇಕೆಂದು ನಿಶ್ಚಯಿಸಿ ಹಿಂತಿರುಗುವನು.

ರಾಮನನ್ನು ಪರಶುರಾಮನಿಂದ ಕೊಲ್ಲಿಸುವ ಪ್ರಯತ್ನವು ವ್ಯರ್ಥವಾಗುವುದು. ವಿದ್ಯಾಜ್ಜಿಹ್ವಾದಿಗಳು ಮಂಥರೆ ಕೈಕೇಯೀ ದಶರಥರಲ್ಲಿ ಆವಿಷ್ಟರಾಗಿ ರಾಮನನ್ನು ಕಾಡಿಗೆ ಕಳುಹಿಸುವರು. ಅಲ್ಲಿ ವಿರಾಧ ಶೂರ್ಪನಖಿಯರು ರಾಮಸೀತೆಯರ ವೇಷವನ್ನು ಹಾಕಿಕೊಂಡು ಸೀತಾರಾಮರನ್ನು ಹೊತ್ತುಕೊಂಡು ಹೋಗಲು ಬಂದು ಭ್ರಾಂತಿ ಪಟ್ಟು ವಿರಾಧನು ಶೂರ್ಪನಖಿಯನ್ನೇ (ಸೀತೆಯೆಂದು) ಹೊತ್ತುಕೊಂಡು ಹೋಗುವನು. ಜಟಾಯುವನ್ನು ಕಂಡು ಇಬ್ಬರೂ ನೆಲದ ಮೇಲೆ ಬೀಳಲು, ಲಕ್ಷ್ಮಣನು ವಿರಾಧನನ್ನು ಕೊಂದು ಶೂರ್ಪನಖಿಯ ಕಿವಿಮೂಗು ಕೊಯ್ಯುವನು.

ಸೀತಾಹರಣದಿಂದ ವಾಲಿವಧೆಯವರೆಗಿನ ಕಥೆ ಸೀತಾವಿರಹಿಯಾದ ರಾವಣನ ವಿನೋದಾರ್ಥವಾಗಿ ಅಪಸ್ಸರ ಸ್ತ್ರೀಯರಿಂದ ಅವನ ಮುಂದೆ "ಅಂತರ್ನಾಟಕ"ವಾಗಿ

ಅಭಿನಯಿಸಲ್ಪಡುವುದು. ವಿಶ್ವಾಮಿತ್ರನು ಕೊಟ್ಟಿದ್ದ 'ರಾಕ್ಷಸಾಂಧೀಕರಣ' ಕಡಗವನ್ನು ತೊಟ್ಟು ಅದೃಶ್ಯವಾಗಿ ಸೀತೆಯೂ ಈ ನಾಟಕವನ್ನು ನೋಡಿ ಗಂಡನ ವೃತ್ತಾಂತವನ್ನು ತಿಳಿಯುವಳು. (ರಾಮನು ಸೀತೆಯನ್ನು ಹುಡುಕಿಕೊಂಡು ಪುರೂರವಸ್ಸಿನ ಹಾಗೆ ಅಲೆಯುತ್ತ ಕಂಡ ಕಂಡ ಗಿರಿ ನದಿ ಗಿಡ ಪಕ್ಷಿಗಳನ್ನು ಕೇಳುವನು. ಅವಳ ಆನೆ ಮರಿಕೇಳೀ ಮಯೂರಾದಿಗಳ ವಿಚಾರವೂ ಬರುವುದು.) ರಾವಣಾದಿ ವಧೆಯಾದ ಮೇಲೆ ಶೂರ್ಪಣಖಿ ತಾಪಸೀ ವೇಷದಿಂದ ಅಯೋಧ್ಯೆಗೆ ಬಂದು ರಾಮಲಕ್ಷ್ಮಣರು ಹತರಾದರೆಂದೂ ಸೀತೆ ನೇಣುಹಾಕಿಕೊಂಡಳೆಂದೂ ಭರತಶತ್ರುಘ್ನರಿಗೆ ತಿಳಿಸಿ ಅವರನ್ನು ಅಗ್ನಿ ಪ್ರವೇಶಮಾಡಿಸುತ್ತಿರಲು ಆಂಜನೇಯನು ಮುಂದೆ ಬಂದು ರಾಮಲಕ್ಷ್ಮಣರ ಯೋಗಕ್ಷೇಮವನ್ನು ತಿಳಿಸುವನು. ಸ್ವಲ್ಪ ಹೊತ್ತಿನಲ್ಲಿ ರಾಮಾದಿಗಳು ಬಂದು ಪಟ್ಟಾಭಿಷೇಕವಾಗುವುದು. (ಲೇಖಕರು: ಎ.ಆರ್.ಕೃಷ್ಣಶಾಸ್ತ್ರೀ–ಸಂಸ್ಕೃತ ನಾಟಕ
ಪ್ರ : ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ–1970,

# ಅನುಬಂಧ-2

## ಸಂಸ್ಕೃತ ನಾಟಕದ ಪಾರಿಭಾಷಿಕ ಪದಗಳು

ಶ್ರೀಕಂಠೇಶಗೌಡರು ಸಂಸ್ಕೃತನಾಟಕಗಳ ಮಾದರಿಯಲ್ಲೇ ಸೀತಾಸ್ವಯಂವರ ರಚಿಸಿದ್ದಾರೆ ಅಲ್ಲಿಯ ನಾಟಕದ ಪಾರಿಭಾಷಿಕ ಪದಗಳನ್ನು ಇಲ್ಲಿಯೂ ಬಳಸಿದ್ದಾರೆ ಅವುಗಳ ಅರ್ಥವನ್ನು ಇಲ್ಲಿ ಕೊಟ್ಟಿದೆ.

1.**ಪ್ರವೇಶಕ–** ನಡೆದುಹೋದ ಕಥಾಂಶವನ್ನು ಬರಿಯ ನೀಚ ಪಾತ್ರಗಳಿಂದಲೇ ಸೂಚಿಸುವುದು. ಇದು ಎರಡು ಅಂಕಗಳ ಮಧ್ಯದಲ್ಲಿಯೇ ಬರುತ್ತದೆ.

2.**ಪ್ರಕಾಶ–** ಎಲ್ಲರೂ ಕೇಳಬಹುದಾದದ್ದು (ಶ್ರಾವ್ಯ)

3.**ಸ್ವಗತ–** ಮಾತನಾಡುವ ಪಾತ್ರವಲ್ಲದೆ ಮತ್ತಾರು ಕೇಳದ್ದು (ಅಶ್ರಾವ್ಯ)

4.**ಜನಾಂತಿಕ–** ಒಬ್ಬರನ್ನು ಮರೆಮಾಡಿಕೊಂಡು ಮತ್ತೊಬ್ಬರೊಡನೆ ಮಾತನಾಡುವುದು.

(ಲೇಖಕರು: ಎ.ಆರ್.ಕೃಷ್ಣಶಾಸ್ತ್ರೀ–ಸಂಸ್ಕೃತ ನಾಟಕ

ಪ್ರ : ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ–1970),

5.**ನಾಂದಿ:** ನಾಟಕಾರಂಭದಲ್ಲಿ ಬರುವ ಮಂಗಳ ಶ್ಲೋಕ, ಕೆಲವೊಮ್ಮೆ ಸೂತ್ರಧಾರನ ಪ್ರವೇಶದ ನಂತರ ಈ ಮಂಗಳ ಶ್ಲೋಕ ಹೇಳುವುದುಂಟು.

6.**ನಟ:** ಪ್ರಸ್ತಾವನೆಯಲ್ಲಿ ಸೂತ್ರಧಾರನು ವಿದೂಷಕ/ಪಾರಿಪಾರ್ಶ್ವಕ ಅಥವಾ ನಟಿಯೊಡನೆ ನಾಟಕದ ಕಥಾವಸ್ತುವನ್ನು ಸೂಚಿಸುತ್ತಾನೆ. ಸೂತ್ರಧಾರನೊಂದಿಗೆ ಮಾತನಾಡುವುದನ್ನು ನಟಿ ನಾಟಕದಲ್ಲಿ ಪಾತ್ರ ವಹಿಸುವಳು ನಟಿಯೇ.

7. **ಪ್ರಸ್ತಾವನೆ:** ಸೂತ್ರಧಾರ ನಾಟಕದ ಕಥಾವಸ್ತುವನ್ನು ಪ್ರಾರಂಭದಲ್ಲಿ ನಾಂದಿಯ ನಂತರ ಸೂಚಿಸುತ್ತಾನೆ. ಈ ಕಥಾವಸ್ತುವಿನಲ್ಲಿ ಕೆಲವು ಸಂಗತಿ ಪರದೆ ಹಿಂದೆ ನಡೆಯತಕ್ಕವು ಮತ್ತೆ ಕೆಲವು ಹಿಂದೆ ಅಥವಾ ಮುಂದೆ ನಡೆಯತಕ್ಕವು, ಇದೇ ಪ್ರಸ್ತಾವನೆ.

# ಅನುಬಂಧ-3

## -:ಅಡಿಟಿಪ್ಪಣಿಗಳು:-

**ಅಧ್ಯಾಯ - 1**

1. 1812ರಲ್ಲಿಯೇ ಧರ್ಮಸ್ಥಳದ ಯಕ್ಷಗಾನ ಮೇಳವೊಂದು ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರ ಆಸ್ಥಾನಕ್ಕೆ ಬಂದು ಆಸರೆ ಪಡೆಯಿತು. ಇದಕ್ಕು ಮೊದಲೇ 1628ರಲ್ಲಿ ಗೋವಿಂದ ದೀಕ್ಷಿತನು ರಚಿಸಿದ "ಸಂಗೀತಸುಧೆ"ಯಲ್ಲಿ ಯಕ್ಷಗಾನದ ಬಗೆಗೆ "ಅದೊಂದು ವಿಶಿಷ್ಟವಾದ ಸಂಗೀತ ಪದ್ಧತಿ" ಎಂಬ ಉಲ್ಲೇಖವಿದೆ. (ಡಾ.ಹೆಚ್.ಕೆ. ರಂಗನಾಥ್, ಕನ್ನಡ ನಾಟಕ ಕಲೆ, ಪುಟ-25)

2. ಮೈಸೂರಿನ ಅರಸ ಚಿಕ್ಕದೇವರಾಜನ ಆಸ್ಥಾನದಲ್ಲಿದ್ದ ಸಿಂಗರಾರ್ಯನಿಂದ ರಚನೆಯಾದ 'ಮಿತ್ರವಿಂದಾ ಗೋವಿಂದ (1680) ನಾಟಕವೇ ಕನ್ನಡದಲ್ಲಿ ಲಭ್ಯವಾಗಿರುವ ಮೊದಲ ನಾಟಕ ಇದು ಸಂಸ್ಕೃತದ ಶ್ರೀಹರ್ಷನ ರತ್ನಾವಳೀ ನಾಟಕದ ರೂಪಾಂತರ.

3. ಕರ್ನಾಟಕದಲ್ಲಿ ರಂಗಭೂಮಿ ವೃತ್ತಿನಿರತವಾಗಿ 1877ರಲ್ಲಿ ಶಾಂತಕವಿತಗಳ ಗದುಗಿನ ಶ್ರೀ ವೀರನಾರಾಯಣ ಪ್ರಾಸಾದಿತ ಕೃತಪುರ ನಾಟಕ ಮಂಡಳಿ ಸ್ಥಾಪನೆಯಾಯಿತು.

4. 1582ರಿಂದ 1629ರವರೆಗೆ ಆಳಿದ ಕೆಳದಿಯ ವೆಂಕಟಪ್ಪನಾಯಕನು ತನ್ನ "ಇಕ್ಕೇರಿಯರಮನೆಯೊಳ್ ಚಿತ್ರಕರ ರಚನಾ ಕೌಶಲ್ಯದಿಂದ ನಾಟಕ ಶಾಲೆಯಂ; ನಿರ್ಮಾಣ ಗೆಯ್ಯಿದನ್" ಎಂಬುದಾಗಿ ಲಿಂಗಣ್ಣ ಕವಿಯು ರಚಿಸಿದ "ಕೆಳದಿ ನೃಪವಿಜಯ" ದಲ್ಲಿ ಖಚಿತವಾದ ಮಾತಿದೆ. (ಡಾ.ಹೆಚ್.ಕೆ. ರಂಗನಾಥ್ ಕನ್ನಡ ನಾಟಕ ಕಲೆ-ಪುಟ-21)

5. **(ಅ) ಮ್ಯಾಕ್ಬೆತ್ ಅನುವಾದಗಳು\ರೂಪಾಂತರಗಳು**
   ಮ್ಯಾಕ್ಬೆತ್-ಚೆನ್ನಬಸಪ್ಪ ಬಸವಲಿಂಗಪ್ಪ ಧಾರವಾಡ-1881.
   ಪ್ರತಾಪರುದ್ರದೇವ-ಎಂ.ಎಲ್.ಶ್ರೀಕಂಠೇಶಗೌಡ-1895.
   ಮ್ಯಾಕ್ಬೆತ್-ಡಿ.ವಿ.ಗುಂಡಪ್ಪ-1936.
   ಮ್ಯಾಕ್ಬೆತ್-ರಾಮಚಂದ್ರದೇವ-1975.
   ಮ್ಯಾಕ್ಬೆತ್-ಕೆ.ಎಸ್.ಗೋಪಾಲ್-1977.
   ಮ್ಯಾಕ್ಬೆತ್-ಪರ್ವತವಾಣಿ-1985.
   ಮ್ಯಾಕ್ಬೆತ್-ಸುಧಾಕರ-1989.

(ಆ) ಎ ಮಿಡ್ ಸಮ್ಮರ್ ನೈಟ್ಸ್ ಡ್ರೀಮ್ ಅನುವಾದಗಳು\ರೂಪಾಂತರಗಳು.
ಪ್ರಮೀಳಾರ್ಜುನೀಯಂ-ಎಂ.ಎಲ್.ಶ್ರೀಕಂಠೇಶಗೌಡ-1896.
ಯವನ ಯಾಮಿನಿ ವಿನೋದ-ಬಾಪುಸುಬ್ಬರಾವ್-1901.
ಯವನ ಯಾಮಿನಿ ಕತೆಗಳು-ವೇದಮಿತ್ರ,ಪಿ.-1905.
ವಸಂತ ಯಾಮಿನೀ ಸ್ವಪ್ನಚಮತ್ಕಾರ-ವಾಸುದೇವಾಚಾರ್ಯ-1916.
ಎ ಮಿಡ್ ಸಮ್ಮರ್ ನೈಟ್ಸ್ ಡ್ರೀಮ್-ಕೆ.ಎಸ್.ನಿಸಾರ್‌ಅಹಮದ್-1974.

**ಅಧ್ಯಾಯ-2:**

1a. ನಚಿಕೇತ ನಾಟಕ- ಲೇ: ಸಿ.ಕೆ. ವೆಂಕಟರಾಮಯ್ಯ ಒಂದು ನಿದರ್ಶನ
ಸಾಮ್ರಾಜ್ಞೆ ನಾಟಕ- ನಿರಂಜನ ಇನ್ನೊಂದು ನಿದರ್ಶನ
1b. ಎಚ್.ಕೆ. ರಂಗನಾಥ-ಕನ್ನಡ ರಂಗಭೂಮಿಯ ವಿಕಾಸ (ಪುಟ-190)
2. ಎಚ್.ಕೆ.ರಂಗನಾಥ-ಕನ್ನಡ ರಂಗಭೂಮಿಯ ವಿಕಾಸ (ಪುಟ-11)
3. ಟಿ.ಎಂ.ವೆಂಕಾಟಾಚಲಶಾಸ್ತ್ರಿ-ಹೊಸಗನ್ನಡ ಮಿತ್ರವಿಂದಾ ಗೋವಿಂದ (ಪುಟ10)
4. ಶಿವರಾಮಕಾರಂತ- ಯಕ್ಷಗಾನ ಬಯಲಾಟ (ಪುಟ-41)
5. ಎಂ.ಸಿ.ಮಹದೇವಸ್ವಾಮಿ-ಕನ್ನಡ ರಂಗಭೂಮಿಯ ಶತಮಾನೋತ್ಸವ ಸ್ಮಾರಕ ಗ್ರಂಥ (ಪುಟ-20)
6. ಕೆ.ಮರುಳಸಿದ್ದಪ್ಪ_ಆಧುನಿಕ ಕನ್ನಡ ನಾಟಕ (ಪುಟ-74)
7. ಕೆ.ಮರುಳಸಿದ್ದಪ್ಪ-ಆಧುನಿಕ ಕನ್ನಡ ನಾಟಕ (ಪುಟ-84)
8. ಕೆ.ಮರುಳಸಿದ್ದಪ್ಪ-ಆಧುನಿಕ ಕನ್ನಡ ನಾಟಕ (ಪುಟ-87)
9. ಎಚ್.ಕೆ.ರಂಗನಾಥ-ಕನ್ನಡ ರಂಗಭೂಮಿ ವಿಕಾಸ (ಪುಟ-121)
10. ಎಚ್.ಕೆ.ರಂಗನಾಥ-ಕನ್ನಡ ರಂಗಭೂಮಿ ವಿಕಾಸ (ಪುಟ-121)
11. ಕೆ.ಮರುಳಸಿದ್ದಪ್ಪ-ಆಧುನಿಕ ಕನ್ನಡ ನಾಟಕ (ಪುಟ-42)
12. ಎಚ್.ಕೆ.ರಂಗನಾಥ-ಕರ್ನಾಟಕ ರಂಗಭೂಮಿ (ಪುಟ-129)
13. ಎಚ್.ಕೆ.ರಂಗನಾಥ-ಕರ್ನಾಟಕ ರಂಗಭೂಮಿ (ಪುಟ-152)
14. ಕೆ.ಮರುಳಸಿದ್ದಪ್ಪ-ಆಧುನಿಕ ಕನ್ನಡ ನಾಟಕ (ಪುಟ-46)
15. ಎಚ್.ಕೆ.ರಂಗನಾಥ-ಕರ್ನಾಟಕ ರಂಗಭೂಮಿ (ಪುಟ-166)
16. ಎಚ್.ಕೆ.ರಂಗನಾಥ-ಕರ್ನಾಟಕ ರಂಗಭೂಮಿ (ಪುಟ-163)

**ಅಧ್ಯಾಯ-3:**

1. ತ.ಸು.ಶಾಮರಾಯ-ಕನ್ನಡದಲ್ಲಿ ಷೇಕ್ಸ್‌ಪಿಯರ್‌ನಾಟಕಗಳು (ಪು-14)
   ಸಂಪಾದಕರು-ಷೇಕ್ಸ್‌ಪಿಯರ್‌ಗೆ ನಮಸ್ಕಾರ-ಶಾ.ಬಾಲುರಾವ್
2. ಮರುಳಸಿದ್ದಪ್ಪ-ಆಧುನಿಕ ಕನ್ನಡ ನಾಟಕ (ಪು-90)
3. ಕೆ.ಮರುಳಸಿದ್ದಪ್ಪ-ಷೇಕ್ಸ್‌ಪಿಯರ್‌ನ ನಾಟಕದ ಅನುವಾದ ಮತ್ತು ರೂಪಾಂತರ ನವೋದಯ ಪೂರ್ವ (ಪು-14)
   ಸಂಪಾದಕರು-ಜಿ.ಎಸ್.ಶಿವರುದ್ರಪ್ಪ-ಷೇಕ್ಸ್‌ಪಿಯರ್ ಮತ್ತು ಕನ್ನಡ ಸಾಹಿತ್ಯ
4. ಜಿ.ಕೆ.ಗೋವಿಂದರಾವ್-ಷೇಕ್ಸ್‌ಪಿಯರ್ ಭಾಷಾಂತರಗಳು 60ರ ದಶಕದ ನಂತರ ಕೆಲವು ಟಿಪ್ಪಣಿಗಳು (ಪು-30)
   ಸಂಪಾದಕರು-ಜಿ.ಎಸ್.ಶಿವರುದ್ರಪ್ಪ-ಷೇಕ್ಸ್‌ಪಿಯರ್ ಮತ್ತು ಕನ್ನಡ ಸಾಹಿತ್ಯ
5. ಕೆ.ಮರುಳಸಿದ್ದಪ್ಪ-ಷೇಕ್ಸ್‌ಪಿಯರ್‌ನ ನಾಟಕಗಳ ಅನುವಾದ ಮತ್ತು ರೂಪಾಂತರಗಳಲ್ಲಿ ನವೋದಯ ಪೂರ್ವ (ಪು-14)
6. ಜಿ.ಕೆ.ಗೋವಿಂದರಾವ್-ಷೇಕ್ಸ್‌ಪಿಯರ್ ಭಾಷಾಂತರಗಳು 60ರ ದಶಕದ ನಂತರ ಕೆಲವು ಟಿಪ್ಪಣಿಗಳು (ಪು-36-37)
   ಸಂಪಾದಕರು-ಜಿ.ಎಸ್.ಶಿವರುದ್ರಪ್ಪ-ಷೇಕ್ಸ್‌ಪಿಯರ್ ಮತ್ತು ಕನ್ನಡ ಸಾಹಿತ್ಯ
7. ಕೆ.ಮರುಳಸಿದ್ದಪ್ಪ-ಷೇಕ್ಸ್‌ಪಿಯರ್‌ನ ನಾಟಕಗಳ ಅನುವಾದ ಮತ್ತು ರೂಪಾಂತರಗಳಲ್ಲಿ ನವೋದಯ ಪೂರ್ವ (ಪು-18)
   ಸಂಪಾದಕರು-ಜಿ.ಎಸ್.ಶಿವರುದ್ರಪ್ಪ-ಷೇಕ್ಸ್‌ಪಿಯರ್ ಮತ್ತು ಕನ್ನಡ ಸಾಹಿತ್ಯ
8. ರಾಮಚಂದ್ರದೇವ-ಷೇಕ್ಸ್‌ಪಿಯರ್ ಎರಡು ಸಂಸ್ಕೃತಿಗಳಲ್ಲಿ (ಪು-14)
9. ಕೆ.ಮರುಳಸಿದ್ದಪ್ಪ-ಷೇಕ್ಸ್‌ಪಿಯರ್‌ನ ನಾಟಕಗಳ ಅನುವಾದ ಮತ್ತು ರೂಪಾಂತರಗಳು ನವೋದಯ ಪೂರ್ವ (ಪು-10)
   ಸಂಪಾದಕರು-ಜಿ.ಎಸ್.ಶಿವರುದ್ರಪ್ಪ-ಷೇಕ್ಸ್‌ಪಿಯರ್ ಮತ್ತು ಕನ್ನಡ ಸಾಹಿತ್ಯ
10. ಎ.ಎನ್.ಮೂರ್ತಿರಾವ್-ಷೇಕ್ಸ್‌ಪಿಯರ್ (ಪು-301)
11. ಕೆ.ಮರುಳಸಿದ್ದಪ್ಪ-ಷೇಕ್ಸ್‌ಪಿಯರ್‌ನ ನಾಟಕಗಳ ಅನುವಾದ ಮತ್ತು ರೂಪಾಂತರಗಳು ನವೋದಯ ಪೂರ್ವ (ಪು-7)

ಸಂಪಾದಕರು–ಜಿ.ಎಸ್.ಶಿವರುದ್ರಪ್ಪ–ಷೇಕ್ಸ್‌ಪಿಯರ್ ಮತ್ತು ಕನ್ನಡ ಸಾಹಿತ್ಯ

12. ಡಾ॥ ಕರೀಗೌಡ ಬೀಚನಹಳ್ಳಿ–ಕನ್ನಡದಲ್ಲಿ ಷೇಕ್ಸ್‌ಪಿಯರ್ (ಪು–119)

13. ಎ.ಎನ್.ಮೂರ್ತಿರಾವ್–ಷೇಕ್ಸ್‌ಪಿಯರ್ (ಪು–283)

14. ಜಿ.ಕೆ.ಗೋವಿಂದರಾವ್–ಷೇಕ್ಸ್‌ಪಿಯರ್ ಭಾಷಾಂತರಗಳು 60 ದಶಕದ ನಂತರ ಕೆಲವು ಟಿಪ್ಪಣಿಗಳು (ಪು–33)
ಸಂಪಾದಕರು–ಜಿ.ಎಸ್.ಶಿವರುದ್ರಪ್ಪ–ಷೇಕ್ಸ್‌ಪಿಯರ್ ಮತ್ತು ಕನ್ನಡ ಸಾಹಿತ್ಯ

15. ಡಾ॥ ಕರೀಗೌಡ ಬೀಚನಹಳ್ಳಿ–ಕನ್ನಡದಲ್ಲಿ ಷೇಕ್ಸ್‌ಪಿಯರ್ (ಪು–132)

16. ಡಾ॥ ಕರೀಗೌಡ ಬೀಚನಹಳ್ಳಿ–ಕನ್ನಡದಲ್ಲಿ ಷೇಕ್ಸ್‌ಪಿಯರ್ (ಪು–92)

17. ಎ.ಎನ್.ಮೂರ್ತಿರಾವ್–ಷೇಕ್ಸ್‌ಪಿಯರ್ (ಪು–192)

18. ಕೆ.ಮರುಳಸಿದ್ದಪ್ಪ–ಷೇಕ್ಸ್‌ಪಿಯರ್‌ನ ನಾಟಕಗಳ ಅನುವಾದ ಮತ್ತು ರೂಪಾಂತರಗಳು ನವೋದಯ ಪೂರ್ವ (ಪು–6)
ಸಂಪಾದಕರು–ಜಿ.ಎಸ್.ಶಿವರುದ್ರಪ್ಪ–ಷೇಕ್ಸ್‌ಪಿಯರ್ ಮತ್ತು ಕನ್ನಡ ಸಾಹಿತ್ಯ

19. ಡಾ॥ ಕರೀಗೌಡ ಬೀಚನಹಳ್ಳಿ–ಕನ್ನಡದಲ್ಲಿ ಷೇಕ್ಸ್‌ಪಿಯರ್ (ಪು–107)

20. ಎಚ್.ಎಸ್.ಶಿವಪ್ರಕಾಶ–ಷೇಕ್ಸ್‌ಪಿಯರ್ ಮತ್ತು ಭಾರತೀಯ ನಾಟಕ ಪರಂಪರೆ (ಪು–42)

21. ಎ.ಎನ್.ಮೂರ್ತಿರಾವ್–ಷೇಕ್ಸ್‌ಪಿಯರ್ (ಪು–192)

**ಅಧ್ಯಾಯ–4**

1. (ಸಂ)ಹ.ಕ.ರಾಜೇಗೌಡ–ಶ್ರೀಕಂಠೇಶಗೌಡರ ಜಾನಪದ ಕೊಡುಗೆ (ಪು–6)
2. (ಸಂ)ಹ.ಕ.ರಾಜೇಗೌಡ–ಶ್ರೀಕಂಠೇಶಗೌಡರ ಜಾನಪದ ಕೊಡುಗೆ (ಪು–7)
3. (ಸಂ)ಹ.ಕ.ರಾಜೇಗೌಡ–ಶ್ರೀಕಂಠೇಶಗೌಡರ ಜಾನಪದ ಕೊಡುಗೆ (ಪು–9)
4. (ಸಂ)ಹ.ಕ.ರಾಜೇಗೌಡ–ಶ್ರೀಕಂಠೇಶಗೌಡರ ಜಾನಪದ ಕೊಡುಗೆ (ಪು–10)
5. (ಸಂ)ಹ.ಕ.ರಾಜೇಗೌಡ–ಶ್ರೀಕಂಠೇಶಗೌಡರ ಜಾನಪದ ಕೊಡುಗೆ (ಪು–6)
6. (ಸಂ)ಹ.ಕ.ರಾಜೇಗೌಡ–ಶ್ರೀಕಂಠೇಶಗೌಡರ ಜಾನಪದ ಕೊಡುಗೆ (ಪು–18)

7. (ಸಂ)ಹ.ಕ.ರಾಜೇಗೌಡ–ಶ್ರೀಕಂಠೇಶಗೌಡರ ಜಾನಪದ ಕೊಡುಗೆ (ಪು–29)
8. (ಸಂ)ಹ.ಕ.ರಾಜೇಗೌಡ–ಶ್ರೀಕಂಠೇಶಗೌಡರ ಜಾನಪದ ಕೊಡುಗೆ (ಪು–13)

**ಅಧ್ಯಾಯ–5**

1. ಎನ್.ನಂಜುಡಶಾಸ್ತ್ರಿ–ಷೇಕ್ಸ್‌ಪಿಯರ್‌ನ ಪ್ರಮುಖ ದುರಂತ ನಾಟಕ ಕಥೆಗಳು (ಪು.119)
2. ಎಸ್.ನಂಜುಡಶಾಸ್ತ್ರಿ–ಷೇಕ್ಸ್‌ಪಿಯರ್‌ನ ಪ್ರಮುಖ ದುರಂತ ನಾಟಕ ಕಥೆಗಳು (ಪು.133)
3. ಎನ್.ನಂಜುಡಶಾಸ್ತ್ರಿ–ಷೇಕ್ಸ್‌ಪಿಯರ್‌ನ ಪ್ರಮುಖ ದುರಂತ ನಾಟಕ ಕಥೆಗಳು (ಪು.135)
4. ಎಲ್.ಎಸ್.ಶೇಷಗಿರಿರಾವ್–ಷೇಕ್ಸ್‌ಪಿಯರ್‌ನ ಸಮಗ್ರ ನಾಟಕ ಕಥೆಗಳು(ಪು.239)
5. ಎಲ್.ಎಸ್.ಶೇಷಗಿರಿರಾವ್–ಷೇಕ್ಸ್‌ಪಿಯರ್‌ನ ಸಮಗ್ರ ನಾಟಕ ಕಥೆಗಳು(ಪು.242)
6. ಎಸ್.ವಿ.ರಂಗಣ್ಣ–ಪಾಶ್ಚಾತ್ಯ ಗಂಭೀರ ನಾಟಕಗಳು (ಪು.473)
7. ಎಸ್.ವಿ.ರಂಗಣ್ಣ–ಪಾಶ್ಚಾತ್ಯ ಗಂಭೀರ ನಾಟಕಗಳು (ಪು.471)
8. ಕೆ.ಎಸ್.ಗೋಪಾಲ್–ಷೇಕ್ಸ್‌ಪಿಯರ್ ಮ್ಯಾಕ್ಬೆತ್ (ಪು.63)
9. ಕೆ.ಎಸ್.ಗೋಪಾಲ್–ಷೇಕ್ಸ್‌ಪಿಯರ್ ಮ್ಯಾಕ್ಬೆತ್ (ಪು.26)
10. ಕೆ.ಎಸ್.ಗೋಪಾಲ್–ಷೇಕ್ಸ್‌ಪಿಯರ್ ಮ್ಯಾಕ್ಬೆತ್ (ಪು.28)
11. ಕೆ.ಎಸ್.ಗೋಪಾಲ್–ಷೇಕ್ಸ್‌ಪಿಯರ್ ಮ್ಯಾಕ್ಬೆತ್ (ಪು.73)
12. ಶಂ.ಬಾ.ಜೋಶಿ–ಕಂ ನುಡಿಯ ಹುಟ್ಟು (ಪು.65)
13. ಶಂ.ಬಾ.ಜೋಶಿ–ಕಂ ನುಡಿಯ ಹುಟ್ಟು (ಪು.95)
14. ರಾಮಚಂದ್ರದೇವ–ಷೇಕ್ಸ್‌ಪಿಯರ್‌ನ ಎರಡು ಸಂಸ್ಕೃತಗಳಲ್ಲಿ (ಪು.48)

**ಅಧ್ಯಾಯ–8:**

1.ಎ.ಆರ್. ಕೃಷ್ಣಶಾಸ್ತ್ರಿ–ಸಂಸ್ಕೃತ ನಾಟಕ (ಪುಟ–325)
2.ಶ್ರೀಕಂಠೇಶಗೌಡರ ಸೀತಾಸ್ವಯಂವರ ನಾಟಕದ ಪೀಠಿಕೆ–1901.

# ಅನುಬಂಧ-4

## ಆಕರ ಗ್ರಂಥ ಸೂಚಿ


**ಮ್ಯಾಕ್ಬೆತ್**

1. ಗುಂಡಪ್ಪ ಡಿ.ವಿ., ಗ್ರಂ: ಮ್ಯಾಕ್ಬೆತ್, ಪ್ರ : ಕಾವ್ಯಾಲಯ, ಮೈಸೂರು – 1974
2. ಗೋಪಾಲ್ ಕೆ.ಎಸ್., ಗ್ರಂ: ಮ್ಯಾಕ್ಬೆತ್, ಪ್ರ : ಪುಸ್ತಕಾಲಯ, ಮೈಸೂರು – 1977
3. ಚನ್ನಬಸಪ್ಪ ಧಾರವಾಡ ಬಸವಲಿಂಗಪ್ಪ, ಗ್ರಂ: ಮ್ಯಾಕ್ಬೆತ್, ಪ್ರ : ಚನ್ನಬಸಪ್ಪ, ಧಾರವಾಡ – 1870
4. ಪರ್ವತವಾಣಿ, ಗ್ರಂ: ಮ್ಯಾಕ್ಬೆತ್, ಪ್ರ : ಐ.ಬಿ.ಹೆಚ್. ಬೆಂಗಳೂರು – 1985
5. ಭಗವಾನ್, ಗ್ರಂ: ಮ್ಯಾಕ್ಬೆತ್, ಪ್ರ : ಮಹಿಮ ಪ್ರಕಾಶನ, ಮೈಸೂರು – 2001
6. ರಾಮಚಂದ್ರದೇವ, ಗ್ರಂ: ಮ್ಯಾಕ್ಬೆತ್, ಪ್ರ : ಸಾಕ್ಷಿ ಪ್ರಕಾಶನ, ಹೆಗ್ಗೋಡು – 1975
7. ವಸಿಷ್ಠ, ಗ್ರಂ: ಮ್ಯಾಕ್ಬೆತ್, ಪ್ರ : ಚೇತನ ಬುಕ್ ಹೌಸ್, ಮೈಸೂರು – 2003
8. ವೈದೇಹಿ, ಗ್ರಂ: ಗೊಂಬೆಮ್ಯಾಕ್ಬೆತ್, ಪ್ರ : ಅಕ್ಷರ ಪ್ರಕಾಶನ, ಹೆಗ್ಗೋಡು – 1992
9. ಶ್ರೀಕಂಠೇಶಗೌಡ ಎಂ.ಎಲ್, ಗ್ರಂ: ಪ್ರತಾಪರುದ್ರದೇವ, ಪ್ರ : ಜಿ.ಟಿ.ಎ. ಪ್ರೆಸ್, ಮೈಸೂರು – 1895
10. ಸುಧಾಕರ, ಗ್ರಂ: ಮ್ಯಾಕ್ಬೆತ್, ಪ್ರ : ಪ್ರತಿಭಾಪ್ರಕಾಶನ, ಮೈಸೂರು – 1989
11. ಸುಧಾಕರ, ಗ್ರಂ: ಮಾರನಾಯಕನ ದೃಷ್ಟಾಂತ, ಪ್ರ : ಪರಿಸರ ಪ್ರಕಾಶನ, ಶಿವಮೊಗ್ಗ – 1991

**ಎ ಮಿಡ್ ಸಮ್ಮರ್ ನೈಟ್ಸ್ ಡ್ರೀಮ್**

12. ನಿಸಾರ್ ಅಹಮದ್, ಗ್ರಂ: ಎ ಮಿಡ್ ಸಮ್ಮರ್ ನೈಟ್ಸ್ ಡ್ರೀಮ್, ಪ್ರ: ವಸಂತ ಪ್ರಕಾಶನ, ಬೆಂಗಳೂರು – 1974
13. ಬಾಪು ಸುಬ್ಬರಾವ್, ಗ್ರಂ: ಯವನ ಯಾಮಿನೀ ವಿನೋದ, ಪ್ರ: ಬಿ.ಟಿ.ಎ. ಪ್ರೆಸ್, ಮೈಸೂರು – 1901
14. ವಾಸುದೇವಾಚಾರ್ಯ, ಗ್ರಂ: ವಸಂತಯಾಮಿನೀ ಸ್ವಪ್ನ ಚಮತ್ಕಾರ, ಪ್ರ: ವಾಸುದೇವಾಚಾರ್ಯ, ಕೆರೂರು – 1916
15. ವೇದಮಿತ್ರ ಪಿ., ಗ್ರಂ: ಯವನ ಯಾಮಿನೀ ಕತೆಗಳು, ಪ್ರ: ವೇದಮಿತ್ರ ಪಿ. – 1905
16. ಶ್ರೀಕಂಠೇಶಗೌಡ ಎಂ.ಎಲ್., ಗ್ರಂ: ಪ್ರಮೀಳಾರ್ಜುನೀಯಂ, ಪ್ರ: ಬಿ.ಟಿ.ಎ. ಪ್ರೆಸ್, ಮೈಸೂರು – 1896

**ಸೀತಾಸ್ವಯಂವರ**

17. ಕಲ್ಲಾಪುರಿ ಜಯವೆಂಕಟ, ಗ್ರಂ: ಸೀತಾಸ್ವಯಂವರ, ತಾಳೆಗರಿ ಕೆ.ಬಿ. 675, ಪ್ರ : ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು – 1873
18. ದೇಶಿಕಾಚಾರ್ಯ, ಗ್ರಂ: ರಾಮಾಭ್ಯುದಯ ನಾಟಕಂ, ಪ್ರ : ಎಂ.ಆರ್. ವೆಂಕಟಾಚಲಶೆಟ್ಟಿ, ಬೆಂಗಳೂರು

19. ಪುರಿ ಲಕ್ಷ್ಮಣರಾವ್, ಗ್ರಂ: ಸಂಪೂರ್ಣ ರಾಮಾಯಣ, ಪ್ರ : ಸಿಟಿ ಬುಕ್ ಸ್ಟಾಲ್, ಹುಬ್ಬಳ್ಳಿ - 1947
20. ಬೆಳ್ಳಾವೆ ನರಹರಿಶಾಸ್ತ್ರಿ, ಗ್ರಂ: ರಾಮಾಯಣ ನಾಟಕಗಳು, ಪ್ರ : ಬೆಳ್ಳಾವೆ ಪುಸ್ತಕಾಲಯ, ಬೆಂಗಳೂರು - 1949
21. ಬೆಳ್ಳಾವೆ ನರಹರಿಶಾಸ್ತ್ರಿ, ಗ್ರಂ: ಸೀತಾ ಕಲ್ಯಾಣ, ಪ್ರ : ಬೆಳ್ಳಾವೆ ಪುಸ್ತಕಾಲಯ, ಬೆಂಗಳೂರು - 1954
22. ರಾಮಣ್ಣ ಹು, ಗ್ರಂ: ಸೀತಾಸ್ವಯಂವರ ಪ್ರ : ರಾಮಣ್ಣ ಹು - 1850
23. ಶ್ರೀಕಂಠೇಶಗೌಡ ಎಂ.ಎಲ್, ಗ್ರಂ: ಸೀತಾಸ್ವಯಂವರ, ಪ್ರ : ಜಿಟಿಎ ಪ್ರೆಸ್, ಮೈಸೂರು - 1901
24. ಶ್ರೀಕಂಠಶಾಸ್ತ್ರಿ, ಗ್ರಂ: ಸೀತಾ ಸುವರ್ಣ ಮೃಗ ನಾಟಕಂ, ಪ್ರ : ಕರ್ನಾಟಕ ಚಂದ್ರಿಕೆ23, ಮೈಸೂರು - 1912
25. ಶ್ರೀಕಂಠಶಾಸ್ತ್ರಿ, ಗ್ರಂ: ಸೀತಾಪರಿಣಯ, ಪ್ರ : ಜಿ.ಟಿ.ಎ. ಪ್ರೆಸ್, ಮೈಸೂರು - 1910
26. ಶಾಂತಕವಿ : (ಸೀತಾ ಸ್ವಯಂವರ), ಗ್ರಂ: ಹೊಸಗನ್ನಡ ಸಾಹಿತ್ಯದ ಉದಯ ಕಾಲ, ಧಾರವಾಡಕರ ಪುಟ - 28
27. ಸೂರ್ಯ ನಾರಾಯಣಪ್ಪ ಜಿ., ಗ್ರಂ: ಜಾನಕೀ ಪರಿಣಯ, ಪ್ರ : ಬೆಂಗಳೂರು ಪವರ್ ಪ್ರೆಸ್, ಬೆಂಗಳೂರು - 1887
28. ಹನುಮಾನ್ ವೆಂಕಟರಾಯ, ಗ್ರಂ: ಜಾನಕೀ ಪರಿಣಯ ನಾಟಕಂ, ಪ್ರ : ಶ್ರೀ ಗೌರೀ ನಿಲಯ ಮುದ್ರಣಾಲಯ, ಬೆಂಗಳೂರು - 1914

**ಸಂಕೀರ್ಣ**

29. ಅನಂತನಾರಾಯಣ ಎಸ್., ಗ್ರಂ: ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಸಾಹಿತ್ಯದ ಪ್ರಭಾವ, ಪ್ರ : ಜ್ಞಾನಗಂಗಾ ಪ್ರಕಾಶನ, ಮೈಸೂರು - 1962
30. ಡಾ॥ ಅಮೂರ ಜಿ.ಎಸ್., ಗ್ರಂ: ಕಾಮಿಡಿ, ಪ್ರ : ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು - 1999
31. ಡಾ॥ ಕರೀಗೌಡ ಬೀಚನಹಳ್ಳಿ, ಗ್ರಂ: ಕನ್ನಡದಲ್ಲಿ ಷೇಕ್ಸ್ ಪಿಯರ್, ಪ್ರ : ಸಪ್ನ ಬುಕ್ ಹೌಸ್, ಬೆಂಗಳೂರು - 2005
32. ಗುಂಡಪ್ಪ ಡಿ.ವಿ., ಗ್ರಂ: ಜ್ಞಾಪಕ ಚಿತ್ರಶಾಲೆ, ಸಂಪುಟ-3, ಪ್ರ : ಕಾವ್ಯಾಲಯ ಪ್ರಕಾಶನ, ಮೈಸೂರು - 1970
33. ಗೋಪಾಲ್ ರಾವ್ ಬಿ., ಗ್ರಂ: ಷೇಕ್ಸ್ ಪಿಯರ್‌ನ ಕಥಾಲೋಕ, ಚೇತನ ಬುಕ್ ಹೌಸ್, ಮೈಸೂರು - 1997.
34. ಶ್ರೀಮತಿ ಗೀರ್ವಾಣಿ, ಗ್ರಂ: ಒಥೆಲೊ ಮತ್ತು ಷೇಕ್ಸ್ ಪಿಯರ್ ನಾಟಕ ಕಥೆಗಳು ಪ್ರ : ಅಶೋಕ ಸಾಹಿತ್ಯ, ಬೆಂಗಳೂರು - 1957.
35. ಚಂದ್ರಶೇಖರ ಕಂಬಾರ (ಸಂ), ಗ್ರಂ: ಕನ್ನಡ ನಾಟಕ ಸಂಪುಟ, ಪ್ರ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-1982

36. ಡಾ: ತಾರಕೇಶ್ವರ ವಿ.ಬಿ, ಗ್ರಂ: ವಸಾಹತುಶಾಹಿ ಮತ್ತು ಭಾಷಾಂತರ, ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ –2006.

37. ಧಾರವಾಡ್‌ಕರ. ರಾ.ಯ, ಗ್ರಂ: ಹೊಸಗನ್ನಡ ಸಾಹಿತ್ಯ ಉದಯಶೀಲ, ಪ್ರ: ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ – 1975.

38. ಪ್ರೊ: ನಂಜುಡಶಾಸ್ತ್ರಿ ಎಸ್., ಗ್ರಂ: ಷೇಕ್ಸ್‌ಪಿಯರ್ ಪ್ರಮುಖ ದುರಂತ ನಾಟಕ ಕಥೆಗಳು ಪ್ರ: ಜಿ.ಪಿ.ರೇವಣ್ಣ, 8, 13ನೇ ಬ್ಲಾಕ್, ಕುಮಾರಪಾರ್ಕ್‌ವೆಸ್ಟ್, ಬೆಂಗಳೂರು – 1993.

39. ಪ್ರಧಾನ ಗುರುದತ್ತ, ಗ್ರಂ: ಅನಾವರಣ, ಪ್ರ: ಕನ್ನಡ ಪುಸ್ತಕ ಪ್ರಾಧಿಕಾರ – 2007.

40. ಡಾ॥. ಪುಟ್ಟಪ್ಪ ಕೆ.ವಿ. (ಸಂ) – ಕನ್ನಡ ಕೈಪಿಡಿ ಸಂಪುಟ ೧ – ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ – 1969.

41. ಭಗವತಿ ಎಸ್.ಎಸ್., ಗ್ರಂ: ಹೊಸಗನ್ನಡ ಸಾಹಿತ್ಯಾವಲೋಕನ, ಪ್ರ: ವಿದ್ಯಾನಿಧಿ ಪ್ರಕಾಶನ, ಗದಗ – 2002.

42. ಬಾಲುರಾವ್ ಷಾ, ಷೇಕ್ಸ್ ಪಿಯರ್ ನಮಸ್ಕಾರ, ಪ್ರ: ಕನ್ನಡ ಭಾರತಿ, ಹೊಸದೆಹಲಿ – 1966.

43. ಡಾ॥ ಮರುಳ ಸಿದ್ಧಪ್ಪ ಕೆ, ಗ್ರಂ: ಆಧುನಿಕ ಕನ್ನಡ ನಾಟಕ, ಪ್ರ: ಅಂಕಿತ ಪುಸ್ತಕ, ಬೆಂಗಳೂರು – 2002.

44. ಡಾ॥ ರಂಗನಾಥ್ ಹೆಚ್.ಕೆ., ಗ್ರಂ: ಕರ್ನಾಟಕ ಪುಸ್ತಕ ಪ್ರಾಧಿಕಾರ, ಬೆಂಗಳೂರು – 1978.

45. ಡಾ॥ ರಂಗನಾಥ್ ಹೆಚ್.ಕೆ., ಗ್ರಂ: ಕನ್ನಡ ನಾಟಕ ಕಲೆ, ಪ್ರ: ರಾಜ್ಯ ಸಂಗೀತ ಕನಾಟಕ ಆಕಾಡೆಮಿ, ಮೈಸೂರು – 1972.

46. ರಾಮಕೃಷ್ಣ ಮರಾಠೆ, ಗ್ರಂ: ಆಧುನಿಕ ಕನ್ನಡ ಸಾಹಿತ್ಯ ರೂಪಗಳು, ಪ್ರ:ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಧಾರವಾಡ – 1996.

47. ಡಾ॥ ರಾಮನಾಥ್ ಹೆಚ್.ಕೆ, ಗ್ರಂ: ಕನ್ನಡ ರಂಗಭೂಮಿಯ ವಿಕಾಸ, ಪ್ರ: ಅಭಿನಯ ಪ್ರಕಾಶನ, ಮೈಸೂರು – 1990.

48. ರಂಗಣ್ಣ ಎಸ್.ವಿ, ಗ್ರಂ: ಪಾಶ್ಚಾತ್ಯ ಗಂಭೀರ ನಾಟಕಗಳು, ಪ್ರ: ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ – 1970.

49. ರಾಮರಾವ್ ಎಂ, ಗ್ರಂ: ಷೇಕ್ಸ್‌ಪಿಯರ್, ಪ್ರ: ಉಷಾ ಪ್ರಕಟನಾಲಯ, ಮೈಸೂರು – 1964.

50. ರಾಜೇಗೌಡ ಹ.ಕ, ಗ್ರಂ :ಶ್ರೀಕಂಠೇಶಗೌಡರ ಕೃತಿಗಳು, ಪ್ರ: ಎಂ.ಎಲ್. ಶ್ರೀಕಂಠೇಶಗೌಡರ ಸಂಸ್ಮರಣ ಸಮಿತಿ, ಮೈಸೂರು – 1974.

51. ಲಕ್ಷ್ಮಿ ನರಸಿಂಹ ಶಾಸ್ತ್ರಿ.ವಿ, ಗ್ರಂ: ನಾಟಕ ಕಥೆಗಳು ಪ್ರ: ಕರ್ನಾಟಕ ಪ್ರಕಟನಾಲಯ, ಬೆಂಗಳೂರು – 1934.

52. ವೆಂಕಟೇಶ ಸಾಂಗಲಿ, ಗ್ರಂ: ಸಿರಿಗನ್ನಡ ಗ್ರಂಥಕರ್ತರ ಕೋಶ – 1, ಪ್ರ: ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು – 1999.

53. ವೆಂಕಟಾಚಲಶಾಸ್ತ್ರೀ ಟಿ.ವಿ., ಗ್ರಂ: ಕನ್ನಡ ರಾಮಾಯಣ ಗ್ರಂಥಸೂಚಿ: ಪ್ರ: ಪ್ರೇಮಸಾಯಿ ಪ್ರಕಾಶನ, ಬೆಂಗಳೂರು – 1998.

54. ಡಾ॥. ಟಿ.ವಿ. ವೆಂಕಟಾಚಲಶಾಸ್ತ್ರೀ– ಹೊಸಗನ್ನಡ ವ್ಯಾಕರಣ, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ – 2007.

55. ಶಂ.ಬಾ.ಜೋಶಿ – ಗ್ರಂ: ಕಂನುಡಿಯ ಹುಟ್ಟು, ಸಮಾಜ ಪುಸ್ತಕಾಲಯ, ಧಾರವಾಡ – 1962.

56. ಶಿವರುದ್ರಪ್ಪ ಜಿ.ಎಸ್ (ಸಂ), ಗ್ರಂ: ಷೇಕ್ಸ್‌ಪಿಯರ್ ಮತ್ತು ಕನ್ನಡ ಸಾಹಿತ್ಯ, ಪ್ರ : ಕರ್ನಾಟಕ ಸಾಹಿತ್ಯ ಅಕಾಡೆಮಿ – 1990.

57. ಶೇಷಗಿರಿರಾವ್ ಎಲ್.ಎಸ್., ಗ್ರಂ: ಷೇಕ್ಸ್‌ಪಿಯರ್, ಪ್ರ : ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ – 1987.

58. ಶೇಷಗಿರಿರಾವ್ ಎಲ್.ಎಸ್., ಗ್ರಂ: ಷೇಕ್ಸ್‌ಪಿಯರ್ ಸಮಸ್ತ ನಾಟಕ ಕಥೆಗಳು, ಪ್ರ : ಪೂಜಾ ಪುಸ್ತಕ ಭಂಡಾರ, ಬೆಂಗಳೂರು – 2003.

59. ಶಾಮರಾಯ ತ.ಸು, ಗ್ರಂ: ಕನ್ನಡ ನಾಟಕ ಪ್ರ : ಗೀತಾ ಬುಕ್ ಹೌಸ್, ಮೈಸೂರು – 1961.

60. ಶ್ರೀನಿವಾಸ ಹಾವನೂರು, ಗ್ರಂ: ಹೊಸಗನ್ನಡದ ಅರುಣೋದಯ ಪ್ರ : ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು – 1974

61. ಸಿ.ಪಿ.ಕೆ., ಗ್ರಂ : ಷಷ್ಟಿಲೇಖ, ಪ್ರ : ಚೇತನ ಬುಕ್ ಹೌಸ್, ಮೈಸೂರು – 1999

62. ಹರಿಕೃಷ್ಣಭರಣ್ಯ, ಗ್ರಂ : ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ ಪ್ರ : ಪ್ರವಾಸ ಬಿಡುಗಡೆ ಮಧುರೈ – 1990


## ಇಂಗ್ಲಿಷ್ ಗ್ರಂಥಗಳು


1. Bradlay.A.C - Shakespear Tragedy Pub. Macmillan & Co. Ltd., London - 1920

2. Horwood F.C. - A Mid Sumar Night Dream. Pub. Oxford Universal Press London - 1966

3. Krishna Murthy S. - Macbeth Pub. The little flower Co., Madras - 1959

4. Standly wood - A mid Summer night dream. Pub. George Gill & Sons Ltd., London - 1937

5. Turner - Macbeth Pub. S. Chand & Co. Ltd., New Delhi 1968

